ಸಂಪುಟ ೧೧ ಸಂಚಿಕೆ ೧ ಮಾರ್ಚ್ 1990

# ಬ್ಯಾಂಕಿಂಗ್ ಪ್ರಪಂಚ

೧೦.೪.೯೧

ಸಂಪಾದಕರು
ಎಚ್ಚೆಸ್ಕೆ

ಸಮನ್ವಯ ಸಮಿತಿ
ಆಡಳಿತ ವರ್ಗ

ಅಧ್ಯಕ್ಷ
ಕೃ. ಅನಂತಸ್ವಾಮಿ

ಉಪಾಧ್ಯಕ್ಷರು
ಶಂಕರ ಜಾಲವಾದಿ
ಬೆಂ. ಶ್ರೀ. ರವೀಂದ್ರ

ಪ್ರಧಾನ ಕಾರ್ಯದರ್ಶಿ ಹಾಗೂ ಪ್ರಕಾಶಕ
ಪಾ. ರಾಜಗೋಪಾಲ

ಉಪ ಪ್ರಧಾನ ಕಾರ್ಯದರ್ಶಿಗಳು
ಟಿ. ಕೆ. ರಂಗನಾಥ
ಪ್ರಹ್ಲಾದ ಪಾಟೀಲ್
ಜಿ. ಎನ್. ನರಸಿಂಹಮೂರ್ತಿ

ಸಹಾಯಕ ಪ್ರಧಾನ ಕಾರ್ಯದರ್ಶಿ
ಚಿ. ರಾ. ವೇಣುಗೋಪಾಲ

ಕಛೇರಿ ಕಾರ್ಯದರ್ಶಿಗಳು
ಕೆ. ಎನ್. ಮಹಾಬಲ
ಎಚ್. ಎಲ್. ಗುರುಪ್ರಸಾದ್

ಖಜಾಂಚಿ
ಕ. ನ. ಜಯರಾಮ

ಉಪ ಖಜಾಂಚಿ
ಧನಂಜಯ ಭಂಡಿ

ಆಂತರಿಕ ಲೆಕ್ಕ ಪರಿಶೋಧಕ
ಎಂ. ಸಿ. ಕಣ್ಣನ್

ವಾರ್ಷಿಕ ಚಂದಾ : ರೂ. 15
ಆಜೀವ ಚಂದಾ : ರೂ. 150

## ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

# ವಿಶ್ವವ್ಯಾಪಿ ಅಂತರ ಬ್ಯಾಂಕ್ ಹಣಕಾಸು ಟೆಲಿಸಂಪರ್ಕ ಸಂಘ

**ದೂರವಾಣಿ ಮತ್ತು ಟೆಲೆಕ್ಸ್ ಸಾಧನಗಳಿಂದ ತತ್‌ಕ್ಷಣ ಸಂಪರ್ಕ ಏರ್ಪಟ್ಟರೂ ಮಾಹಿತಿಯ ಪ್ರಾಮಾಣಿಕತೆ ಮತ್ತು ಗೌಪ್ಯತೆಯನ್ನು ಕಾಪಾಡಿಕೊಳ್ಳುವ ಸಲುವಾಗಿ ರೂಪುಗೊಂಡ ಕ್ಷಿಪ್ರ ದೋಷರಹಿತ ವ್ಯವಸ್ಥೆಯೇ ಸ್ವಿಫ್ಟ್**

**ಟಿ. ಎನ್. ನಾಗಾನಂದ**
ಭಾರತೀಯ ಸ್ಟೇಟ್ ಬ್ಯಾಂಕ್
ಜೆ. ಪಿ. ನಗರ ಶಾಖೆ, ಬೆಂಗಳೂರು 560 078

ಬ್ಯಾಂಕುಗಳು ತಮ್ಮ ವ್ಯವಹಾರ ವರ್ಧಿಸಿದಂತೆ, ಉನ್ನತ ತಂತ್ರಜ್ಞಾನವನ್ನು ಬಳಸಿಕೊಳ್ಳುವ ಮೂಲಕ ತಮ್ಮ ಕಾರ್ಯಗಳನ್ನು ಸುಗಮಗೊಳಿಸಿಕೊಂಡು ಗ್ರಾಹಕರಿಗೆ ತೃಪ್ತಿಯ ಸೇವೆಯನ್ನು ನೀಡುವುದು ಅತ್ಯವಶ್ಯವಾಯಿತು. ಈ ಕಾರಣಕ್ಕಾಗಿ ಅವು ಆಧುನಿಕಗೊಂಡುವು, ಗಣಕಗಳನ್ನು ಬಳಸಿಕೊಂಡುವು. ವಿದೇಶಿ ವಿನಿಮಯ ವ್ಯಾಪಾರ ಬೆಳೆದಂತೆ ವಿವಿಧ ದೇಶಗಳ ನಡುವೆ ಸಂಪರ್ಕವನ್ನು ಇಟ್ಟುಕೊಳ್ಳುವುದು ಅವಶ್ಯವಾಯಿತು. ಅಂಚೆ, ದೂರವಾಣಿ ಮತ್ತು ಟೆಲೆಕ್ಸ್ ಪ್ರಮುಖ ಸಂಪರ್ಕ ಸಾಧನಗಳು. ಅಂಚೆ ಸಾಧನ ಕೆಲವು ದಿನಗಳನ್ನು ತೆಗೆದುಕೊಳ್ಳುತ್ತದೆ. ದೂರವಾಣಿ ಮತ್ತು ಟೆಲೆಕ್ಸ್ ಸಾಧನಗಳಿಂದ ತತ್‌ಕ್ಷಣ ಸಂಪರ್ಕ ಏರ್ಪಟ್ಟರೂ ಮಾಹಿತಿಯ ಪ್ರಾಮಾಣಿಕತೆ–ಗೌಪ್ಯತೆಯನ್ನು ಕಾಪಾಡುವುದು ಸುಲಭಸಾಧ್ಯವಲ್ಲ. ಹಾಗಾಗಿ ಮಾಹಿತಿಯನ್ನು ತತ್‌ಕ್ಷಣ, ದೋಷರಹಿತವಾಗಿ ಕಳುಹಿಸಲು ಮತ್ತು ಮಾಹಿತಿಯ ಪ್ರಾಮಾಣಿಕತೆ ಗೌಪ್ಯತೆಯನ್ನು ಒಂದು ತುದಿಯಿಂದ ಇನ್ನೊಂದು ತುದಿಯವರೆಗೆ ಕಾಪಾಡುವ ವ್ಯವಸ್ಥೆಯೊಂದರ ಅವಶ್ಯಕತೆ ಕಂಡುಬಂತು. ಈ ಅಗತ್ಯವೇ ವಿಶ್ವವ್ಯಾಪಿ ಅಂತರಬ್ಯಾಂಕ್ ಹಣಕಾಸು ಟೆಲಿಸಂಪರ್ಕ ಸಂಘ (Society for World-wide Inter-Bank Financial Telecommunication) ಅಥವಾ ಸ್ವಿಫ್ಟ್‌ನ (SWIFT) ಹುಟ್ಟಿಗೆ ಕಾರಣವಾಯಿತು.

## ಸ್ವಿಫ್ಟ್ ಸ್ವರೂಪ

ಸ್ವಿಫ್ಟ್ ಬ್ಯಾಂಕ್ ಸ್ವಾಮ್ಯದ ಲಾಭರಹಿತ ಸಹಕಾರಿ ಸಂಸ್ಥೆ. ಈ ಸಂಸ್ಥೆಯನ್ನು 1973ರಲ್ಲಿ ಯುರೋಪ್ ಮತ್ತು ಉತ್ತರ ಅಮೆರಿಕದ ಬ್ಯಾಂಕುಗಳು ಕೂಡಿ ರೂಪಿಸಿದುವು. ಇದು ಅಂತರ ಬ್ಯಾಂಕ್ ಸಂವಹನಕ್ಕೆ ಮೀಸಲಾದ 'ಅಂತರರಾಷ್ಟ್ರೀಯ ಟೆಲಿಸಂಪರ್ಕ ಜಾಲ'. ಈ ಜಾಲವನ್ನು ಬ್ಯಾಂಕುಗಳು ವಿದೇಶಿ ವಿನಿಮಯ ವ್ಯವಹಾರಕ್ಕೆ ಸಂಬಂಧಿಸಿದಂತೆ ಬಳಸುತ್ತವೆ.

ಸ್ವಿಫ್ಟ್ ಜಾಲ 1977ರಲ್ಲಿ ಬಳಕೆಗೆ ಬಂತು. 1987ರ ಕೊನೆಗೆ 56 ದೇಶಗಳ 1,460 ಬ್ಯಾಂಕುಗಳು ಸ್ವಿಫ್ಟ್ ಸದಸ್ಯತ್ವ ಪಡೆದಿದ್ದುವು. ಈ ಜಾಲ ಸದ್ಯಕ್ಕೆ 44 ದೇಶಗಳಲ್ಲಿ ಬಳಕೆಯಲ್ಲಿದೆ. ಭೌಗೋಳಿಕವಾಗಿ ಎಲ್ಲ ಪ್ರಮುಖ ಬ್ಯಾಂಕ್ ಕೇಂದ್ರಗಳಲ್ಲಿ ಸ್ವಿಫ್ಟ್ ತನ್ನ ಜಾಲವನ್ನು ಹರಡಿಕೊಂಡಿದೆ.

## ಸದಸ್ಯತ್ವ ಪಡೆಯುವ ಕ್ರಮ

**1ನೆಯ ಹಂತ:** ಬ್ಯಾಂಕರುಗಳ ಒಕ್ಕೂಟ ಸಂಸ್ಥೆ ಇದಕ್ಕಾಗಿ ಸಂಘಕ್ಕೆ ಅರ್ಜಿ ಸಲ್ಲಿಸುವುದು. ಒಕ್ಕೂಟದ ಈ ಅರ್ಜಿಯು ತನ್ನ ಸದಸ್ಯ ಬ್ಯಾಂಕುಗಳ ಅರ್ಜಿಗಳನ್ನು ಒಳಗೊಂಡಿರುತ್ತದೆ. ಪ್ರತಿಯೊಂದು ಬ್ಯಾಂಕೂ ತಾನು ಜಾಲದ ಮೂಲಕ ಸಂವಹಿಸುವ ಮಾಹಿತಿಯ ಅಂದಾಜನ್ನು ಸೂಚಿಸಿರಬೇಕು.

**2ನೆಯ ಹಂತ:** ಆಯಾ ದೇಶಕ್ಕೆ ಸಂಪರ್ಕ ನೀಡುವ ಮೊದಲು ಸಾಧ್ಯಾಸಾಧ್ಯತೆಗಳ ಅಧ್ಯಯನವನ್ನು ಸ್ವಿಫ್ಟ್ ನಡೆಸುತ್ತದೆ. ಈ ಅಧ್ಯಯನ ಕೆಳಗೆ ಹೇಳಿರುವ ಅಂಶಗಳನ್ನು ಪರಿಗಣನೆಗೆ ತೆಗೆದುಕೊಂಡು ನಿರ್ಧಾರಕ್ಕೆ ಬರುವುದು :

(i) ಸ್ಥಳೀಯ ಮತ್ತು ಅಂತರರಾಷ್ಟ್ರೀಯ ಲೈನ್‌ಗಳ ಸೌಲಭ್ಯ ಮತ್ತು ಅದರ ದರ,
(ii) ಸ್ವಿಫ್ಟ್ ತನ್ನ ಕಾರ್ಯ ಕೇಂದ್ರವನ್ನು ಸ್ಥಾಪಿಸಲು ಆಯಾ ದೇಶದಲ್ಲಿರುವ ಕಾನೂನು ಮತ್ತು ಕರಗಳ ಅಂಶಗಳು/ತೊಡಕುಗಳು,
(iii) ಸಂಪರ್ಕವನ್ನು ಸ್ಥಾಪಿಸಿದ ಅನಂತರ ಸಿಗುವ ಆರ್ಥಿಕ ಪ್ರಯೋಜನಗಳು.

**3ನೆಯ ಹಂತ:** ಅರ್ಜಿ ಮಂಜೂರಾದ ಅನಂತರ ಬ್ಯಾಂಕ್ ಸದಸ್ಯ ಶುಲ್ಕವನ್ನು ಕೊಡಬೇಕು. ಶುಲ್ಕ 17,50,000 ಬೆಲ್ಜಿಯಂ ಫ್ರಾಂಕ್. ಶುಲ್ಕ ನೀಡಿದ ಮೇಲೆ ಸ್ವಿಫ್ಟ್‌ನ ಆಡಳಿತ ಮಂಡಳಿ ಬ್ಯಾಂಕನ್ನು ಸದಸ್ಯತ್ವಕ್ಕೆ ಸೇರಿಸಿಕೊಳ್ಳುತ್ತದೆ. ಈ ಕಾರ್ಯ ಆಚರಣೆಗೆ ಬರಲು ಸುಮಾರು 18ರಿಂದ 2 ತಿಂಗಳುಗಳ ಅವಧಿ ಬೇಕಾಗುತ್ತದೆ.

ಬ್ಯಾಂಕಿನ ಪ್ರಧಾನ ಕಛೇರಿ ಸ್ವಿಫ್ಟ್ ಸದಸ್ಯತ್ವ ಪಡೆದ ಅನಂತರ, ಅದರ ವಿದೇಶಿ ಶಾಖೆಗಳು ಕೂಡ ಸಹಸದಸ್ಯತ್ವ ಪಡೆಯಬಹುದು (ಸ್ವಿಫ್ಟ್ ಜಾಲ ಆ ಕೇಂದ್ರದಲ್ಲಿದ್ದರೆ).

[ಚಿತ್ರಕ್ಕೆ 2ನೇ ಪುಟ ನೋಡಿ]

ಸ್ವಿಫ್ಟ್ ಎಂಬುದು ಮಾಹಿತಿಯ ಸಂಗ್ರಹ ಮತ್ತು ರವಾನೆಯ ಪ್ರಕ್ರಮೀಕರಣ ದೃಷ್ಟಿಯುಳ್ಳ ಕೇಂದ್ರೀಕೃತ ಜಾಲ ಶಿಲ್ಪ ಆಧಾರದ ಕಂಪ್ಯೂಟರ್ ದತ್ತಾಂಶ ಸಂವಹನದ ವ್ಯವಸ್ಥೆ.

ಚಿತ್ರದಲ್ಲಿ ತೋರಿಸಿರುವಂತೆ ಬ್ಯಾಂಕುಗಳು ಮಾಹಿತಿ ಪ್ರಕ್ರಮೀಕರಣಕ್ಕಾಗಿ ಮುಂದಿನ ಮತ್ತು ರವಾನೆಗಾಗಿ ತಮ್ಮ ದೇಶದ RP (ಪ್ರಾದೇಶಿಕ ಪ್ರಕ್ರಮೀಕಾರಕ) ಜೊತೆ ಸಂಪರ್ಕವನ್ನಿರಿಸಿಕೊಂಡಿರುತ್ತವೆ. T ಮತ್ತು RP ನಡುವೆಯ ಸಂಪರ್ಕ ಸ್ಥಳೀಯ ಕೇಬಲ್‌ಗಳ (ದೂರವಾಣಿ ಲೈನ್) ಮೂಲಕ ಏರ್ಪಟ್ಟಿರುತ್ತದೆ. RPಯಿಂದ OPCಗೆ ಉಪಗ್ರಹದ ಮೂಲಕವಾಗಲಿ ದೂರವಾಣಿ ಚಾನಲ್‌ಗಳಿಂದಾಗಲಿ ಸಂಪರ್ಕವಿರುತ್ತದೆ. ಸದ್ಯಕ್ಕೆ ಆರು OPCಗಳಿವೆ. ಇವು ಬೆಲ್ಜಿಯಂ, ನೆದರ್‌ಲೆಂಡ್ಸ್, ಅಮೆರಿಕ ಮತ್ತು ಇತರ ದೇಶಗಳಲ್ಲಿವೆ. ಒಂದು ಪರಿಚಾಲನ ಕೇಂದ್ರದ (OPC) ಜೊತೆ ಸಂಪರ್ಕವಿರುವ ಒಂದು ದೇಶದ ಬ್ಯಾಂಕ್, 2ನೆಯ ಅಥವಾ ಬೇರಾವುದೇ ಪರಿಚಾಲನ ಕೇಂದ್ರದ ಜೊತೆ ಸಂಪರ್ಕವಿರುವ ಇನ್ನೊಂದು ದೇಶದ ಬ್ಯಾಂಕ್ ಜೊತೆ ಸಂವಹಿಸಲು ಸಾಧ್ಯವಾಗುವಂತೆ ಎಲ್ಲ ಪರಿಚಾಲನ ಕೇಂದ್ರಗಳ ನಡುವೆ ಆಂತರಿಕ ಸಂಪರ್ಕವನ್ನಿಟ್ಟುಕೊಳ್ಳಲಾಗಿದೆ.

ಕಂಪ್ಯೂಟರ್ ಆಧಾರಿತ ಮಾಹಿತಿ ಪ್ರಕ್ರಮೀಕರಣ, ಸಂಗ್ರಹ ಮಾಡಿಕೊಳ್ಳುವ ಮತ್ತು ರವಾನಿಸುವ/ಸ್ವೀಕರಿಸುವ ಕಾರ್ಯವನ್ನು ಬ್ಯಾಂಕ್ ಕಛೇರಿಯಲ್ಲಿರುವ ಸ್ವಿಫ್ಟ್ ಇತ್ಯರ್ಥಕ (T) ಮಾಡುತ್ತದೆ. ಇದು ಒಂದು ಸುಸಜ್ಜಿತ ಉಪಕರಣ. ಇದನ್ನು ವಿಶೇಷವಾಗಿ ಬ್ಯಾಂಕ್ ಕಛೇರಿಯ ಬಳಕೆಗಾಗಿಯೇ ವಿನ್ಯಾಸಗೊಳಿಸಲಾಗಿರುತ್ತದೆ.

ಮಾಹಿತಿಯನ್ನು ಅಂತರರಾಷ್ಟ್ರೀಯ ಶಿಷ್ಟ ರೂಪದಲ್ಲಿ ಬ್ಯಾಂಕಿಂಗ್ ಜಾಲದ ಮೂಲಕ ಕಳುಹಿಸಬೇಕು. ಸದಸ್ಯ ಬ್ಯಾಂಕುಗಳಿಗೆ ಸಂಕೇತ ಪದಗಳನ್ನು ಕೊಡಲಾಗಿರುತ್ತದೆ. ಆ ಸಂಕೇತ ಪದಗಳನ್ನು ಉಪಯೋಗಿಸಿಯೇ ಸ್ವಿಫ್ಟ್ ಇತ್ಯರ್ಥಕಗಳನ್ನು (T) ಬಳಸಬೇಕು. ಸಂಕೇತ ಪದದ ಮೂಲಕ ಕಾರ್ಯವನ್ನು ನಿಯಂತ್ರಿಸಲಾಗಿದೆ.

ಮಾಹಿತಿಯನ್ನು ತಯಾರಿಸಿ ವಿಮರ್ಶಿಸಿದ ಮೇಲೆ ಸಂಗ್ರಹಿಸಿ ಸಂವಹನಕ್ಕೆ ಬ್ಯಾಂಕಿನ ಅಧಿಕೃತ ಅಧಿಕಾರಿ ಬಿಡುಗಡೆ ಮಾಡುವನು. ಬಿಡುಗಡೆ ಮಾಡಲಾದ ಪ್ರತಿಯೊಂದು ಮಾಹಿತಿಯನ್ನು ಸ್ವಿಫ್ಟ್ ಸ್ವೀಕರಿಸಿ, ಮಾಹಿತಿಗಳ ಸಂಖ್ಯೆಯನ್ನು ದಾಖಲು ಮಾಡಿಕೊಳ್ಳುತ್ತದೆ. ಅಲ್ಲದೆ ಮಾಹಿತಿಗಳನ್ನು ರವಾನಿಸಲಾಗದಿದ್ದರೆ ಮತ್ತು ತಡವಾಗಿ




**O P C—Operating Centre—ಪರಿಚಾಲನ ಕೇಂದ್ರ**
**R P —Regional Processors—ಪ್ರಾದೇಶಿಕ ಪ್ರಕ್ರಮೀಕಾರಕಗಳು**
**T —Bank's swift Terminal—ಬ್ಯಾಂಕಿನ ಸ್ವಿಫ್ಟ್ ಇತ್ಯರ್ಥಕ**

ರವಾನಿಸಲಾಗಿದ್ದರೆ ಅದನ್ನು ಸೂಚಿಸುತ್ತದೆ.

ಇತ್ಯರ್ಥಕ(T)ದಿಂದ ಪ್ರಾದೇಶಿಕ ಪ್ರಕ್ರಮೀಕಾರಕಕ್ಕೆ ಸಂವಹನದ ವೇಗ ಸುಮಾರು 2400 BPS (Bauds Per Second—ಟೆಲೆಕ್ಸ್ ಲೈನ್ ವೇಗಕ್ಕಿಂತ 48 ಪಟ್ಟು ಹೆಚ್ಚು) ಅಥವಾ ಇನ್ನೂ ಹೆಚ್ಚು. ಈ ವೇಗ ಸ್ಥಳೀಯ ಲೈನ್‌ಗಳ ಗುಣಮಟ್ಟವನ್ನು ಅವಲಂಬಿಸಿರುತ್ತದೆ. ಪ್ರಾದೇಶಿಕ ಪ್ರಕ್ರಮೀಕಾರಕದಿಂದ(RP) ಪರಿಚಾಲನಾ ಕೇಂದ್ರ (OPC) ಸಂವಹನದ ವೇಗ 9600 BPS (ಟೆಲೆಕ್ಸ್ ಲೈನ್ ವೇಗಕ್ಕಿಂತ 192 ಪಟ್ಟು ಹೆಚ್ಚು).

ಮಾಹಿತಿಯನ್ನು ದೋಷರಹಿತವಾಗಿ ಕಳುಹಿಸಲು ಮತ್ತು ಮಾಹಿತಿಯ ಗೌಪ್ಯತೆ–ಪ್ರಾಮಾಣಿಕತೆ–ಭದ್ರತೆಗಳನ್ನು ಒಂದು ತುದಿಯಿಂದ ಇನ್ನೊಂದು ತುದಿಯ ವರೆಗೆ ಕಾಪಾಡಲು ಹೆಚ್ಚು ಸುಸಜ್ಜಿತ ತಂತ್ರಗಳನ್ನು ಬಳಸಲಾಗಿದೆ. ಜಾಲದ ಮೂಲಕ ಹೋಗುವ ಪ್ರತಿಯೊಂದು ಮಾಹಿತಿಯ ಮೇಲೆ ನಿಗಾ ಇಟ್ಟು ಹದ್ದಿನಲ್ಲಿರುವಂತೆ ಮಾಡಲು ಕಂಪ್ಯೂಟರ್ ವ್ಯವಸ್ಥೆ ಪರಿಶೋಧನೆ (Computer System Audit) ಇದೆ.

ಸ್ವಿಫ್ಟ್ ಮೂಲಕ ಕಳುಹಿಸುವ ಮಾಹಿತಿ ಅಂತರರಾಷ್ಟ್ರೀಯವಾಗಿ ಒಪ್ಪಿರುವ ಶಿಷ್ಟರೂಪದಲ್ಲಿ ಇರಬೇಕು. ಅಂತರರಾಷ್ಟ್ರೀಯ ವ್ಯವಹಾರ, ಪ್ರಕ್ರಮೀಕರಣ, ಖಾತೆ ನಿರ್ವಹಣೆ ಮತ್ತು ಗ್ರಾಹಕ ಸೇವೆಯಲ್ಲಿ ಕಂಪ್ಯೂಟರೀಕರಣಗೊಳ್ಳಲು ಮತ್ತು ಸ್ವಯಂಚಲಿಯಾಗುವತ್ತ ಪ್ರಯತ್ನಪಡುತ್ತಿರುವ ಬ್ಯಾಂಕುಗಳಿಗೆ ಆಧುನಿಕೀಕರಣ ಮತ್ತು ಸ್ವಿಫ್ಟ್‌ನ ಕೊಡುಗೆ ಬಹುಶಃ ಪ್ರಮುಖವಾದುವುಗಳು.

## ಮಾಹಿತಿ ವಿಧಾನಗಳು

ಸ್ವಿಫ್ಟ್ ಮಾಹಿತಿಯ ವಿಧಾನಗಳನ್ನು 10 ಭಾಗಗಳಾಗಿ ವಿಂಗಡಿಸಬಹುದು : 1 ಗ್ರಾಹಕ ವರ್ಗಾವಣೆ, 2 ಬ್ಯಾಂಕ್ ವರ್ಗಾವಣೆ, 3 ಕರೆನ್ಸಿ ವ್ಯವಹಾರ, 4 ವಸೂಲಾತಿ ಮತ್ತು ಸಾಲಗಳು, 5 ಬಂಡವಾಳ ಪತ್ರಗಳು, 6 ದಸ್ತೈವಜಾಧಾರಿತ ಉದರಿಗಳು, 7 ಸಂಲೇಖಗಳ ಪಾವತಿ, 8 ಸಾಮಾನ್ಯ ಗುಂಪು (common group). 9 ವ್ಯವಸ್ಥೆ (system), 10 ಇತರೆ. ಪ್ರತಿಯೊಂದು ಭಾಗದಲ್ಲಿ ವಿವಿಧ ರೀತಿಯ ವ್ಯವಹಾರಗಳಿಗೆ ನಿರ್ದಿಷ್ಟ ಮಾಹಿತಿ ನಮೂನೆಗಳನ್ನು ರೂಪಿಸಲಾಗಿದೆ.

ಭದ್ರತೆ ಮತ್ತು ನಂಬಿಕೆ—ಇವು ಸಂವಹನದ ವ್ಯವಸ್ಥೆಯಲ್ಲಿ ಬ್ಯಾಂಕುಗಳಿಗೆ ಬಹಳ ಮುಖ್ಯ. ಗೌಪ್ಯತೆ, ಖಚಿತತೆ ಮತ್ತು ದೋಷರಹಿತ ಸೇವೆ ನೀಡುವಲ್ಲಿ ಶೇಕಡ 100ರಷ್ಟು ಸುರಕ್ಷಿತವೆಂದು ಬ್ಯಾಂಕರನಿಗೆ ನಂಬಿಕೆ ಬರಬೇಕು. ಕಳೆದ ಹತ್ತು ವರ್ಷಗಳಲ್ಲಿ ಸ್ವಿಫ್ಟ್ ಜಾಲದ ಮೇಲಿನ ನಂಬಿಕೆ ಮತ್ತು ಸೇವೆಯ ಖಚಿತತೆ ಶೇ. 99.7ರಷ್ಟಿದೆ.

ಇಷ್ಟೆಲ್ಲ ಯಶಸ್ಸು ಹೇಗೆ ಸಾಧ್ಯವಾಯಿತು ?

ಉತ್ತರ—ಸ್ವಿಫ್ಟ್‌ನ ಸಫಲತೆ. ಸ್ವಿಫ್ಟ್‌ನ ತಾಂತ್ರಿಕಾಂಶ(software), ಯಾಂತ್ರಿಕಾಂಶ(hardware) ಮತ್ತು ವ್ಯವಸ್ಥೆಯ ನಿರ್ವಹಣೆಗಳು ಬ್ಯಾಂಕರನ ಕಠಿಣ ಗುರಿಗಳನ್ನು ಈಡೇರಿಸುವಲ್ಲಿ ಯಶಸ್ವಿಯಾಗಿವೆ.

ಕೆಳಗೆ ಹೇಳಿರುವ ವಿಧಾನಗಳ ಸಂಯೋಗಗಳಿಂದ ಮಾಹಿತಿಯ ಗೌಪ್ಯತೆ, ಭದ್ರತೆ ಮತ್ತು ಪ್ರತ್ಯೇಕತೆಯನ್ನು ಕಾಪಾಡಲಾಗಿದೆ : 1 ಗೂಢಲಿಪೀಕರಣ (incryption), 2 ಅಭಿಪ್ರಮಾಣನ ಕೀಲಿಗಳು (authentication keys), 3ಸಂಕೇತ ಪದ (pass word), 4 ಕಾರ್ಯನಿರ್ವಹಣೆ ಮತ್ತು ಸಂರಕ್ಷಣೆ. ಅಧಿಕೃತ ಸಿಬ್ಬಂದಿಗಳಿಂದ ವ್ಯವಸ್ಥೆಯ ನಿಯಂತ್ರಣ ಮತ್ತು ನಿಗಾ.

ಮಾಹಿತಿಯ ಸಂಚಾರಗಳ ಸಂಖ್ಯೆ ದಿನಕ್ಕೆ 10 ಲಕ್ಷವನ್ನು ದಾಟಿದೆ. ಪ್ರತಿ ಸಾಧಾರಣ ಮಾಹಿತಿಗೆ ರೂ.6/50 ತಗಲುವುದು (325 character). ಈ ದರ ವಿಶ್ವಾದ್ಯಂತ ಏಕರೂಪದ್ದಾಗಿದೆ. ತುರ್ತಾಗಿ ಮಾಹಿತಿಯನ್ನು ಕಳುಹಿಸಬೇಕಿದ್ದಲ್ಲಿ ಹೆಚ್ಚಿನ ದರ ನೀಡಿದರೆ ಆದ್ಯತೆಯನ್ನು ನೀಡಲಾಗುತ್ತದೆ. ಸ್ವಿಫ್ಟ್‌ನ ವಾರ್ಷಿಕ ವರಮಾನ 60 ಕೋಟಿ ಬೆಲ್ಜಿಯಂ ಫ್ರಾಂಕ್.

ರವಾನಿಸಿದ ಮಾಹಿತಿಯನ್ನು ಎರಡು ವಾರಗಳ ಕಾಲ ಸ್ಮೃತಿಯಲ್ಲಿಟ್ಟುಕೊಳ್ಳಲು ಸಾಧ್ಯವಾಗುವಂತೆ ವ್ಯವಸ್ಥೆಯನ್ನು ರೂಪಿಸಲಾಗಿದೆ. ರವಾನಿಸಿದವ/ಸ್ವೀಕರಿಸಿದವ ಮಾಹಿತಿಯನ್ನು ಪುನರ್ವಿಮರ್ಶೆಗಾಗಿ ಅಥವಾ ದಾಖಲೆಗಾಗಿ ಮತ್ತೊಮ್ಮೆ ಪಡೆಯಬಹುದು. ಒಂದು ಮಾಹಿತಿ (A) ವ್ಯವಸ್ಥೆಯ ಒಳಹೊಕ್ಕರೆ ಅದನ್ನು ಹಿಂತೆಗೆದುಕೊಳ್ಳಲು ಸಾಧ್ಯ

ವಿಲ್ಲ. ಬೇರೊಂದು ಮಾಹಿತಿಯನ್ನು (B) ನೀಡಿಯೇ ರವಾನಿಸಿದ ಮಾಹಿತಿಯನ್ನು (A) ರದ್ದುಮಾಡ ಬೇಕು.

### ತರಬೇತಿ ಕಾರ್ಯಕ್ರಮ

ಕಾರ್ಯನಿರತ ಸಿಬ್ಬಂದಿಗಳಿಗೆ ದಕ್ಷತೆ ಮತ್ತು ಕೌಶಲ ಹೆಚ್ಚಿಸಲು ತರಬೇತಿ ಕಾರ್ಯಕ್ರಮವನ್ನು ಸ್ವಿಫ್ಟ್ ರೂಪಿಸಿದೆ. ಇದು ಸ್ವಿಫ್ಟ್‌ನ ನಿರಂತರ ಕಾರ್ಯ. ಇದರಿಂದ ವ್ಯವಸ್ಥೆ ಹೆಚ್ಚು ಸುಸಜ್ಜಿತವಾಗಲು ಮತ್ತು ದಕ್ಷತೆ ಹೊಂದಲು ಅನುವು ಆಗಿದೆ. ತರಬೇತಿ ಕಾರ್ಯಕ್ರಮವನ್ನು ವಾರ್ಷಿಕ ಸರದಿ ಮೇರೆಗೆ ಆಯಾ ಪ್ರಾದೇಶಿಕ ಹಂತದಲ್ಲಿ ನಡೆಸಲಾಗುವುದು.

ಸ್ವಿಫ್ಟ್ ಸಂಪರ್ಕ ಪಡೆಯುವ ಪ್ರತಿ ರಾಷ್ಟ್ರದಲ್ಲೂ ರಾಷ್ಟ್ರೀಯ ಮಟ್ಟದ ಒಂದು ವೇದಿಕೆಯನ್ನು ಸ್ಥಾಪಿಸಲಾಗಿರುತ್ತದೆ. ಈ ವೇದಿಕೆಯಲ್ಲಿ ಸಮಸ್ಯೆಗಳನ್ನು ಪೂರ್ಣವಾಗಿ ಚರ್ಚಿಸಿ, ಬ್ರಸೆಲ್ಸ್‌ನಲ್ಲಿರುವ ಸ್ವಿಫ್ಟ್ ಮುಖ್ಯ ಕಛೇರಿಯಲ್ಲಿ ನಡೆಯುವ ಅಂತರರಾಷ್ಟ್ರೀಯ ಮಟ್ಟದ ವಾರ್ಷಿಕ ಸಭೆಯಲ್ಲಿ ಪ್ರತಿ ರಾಷ್ಟ್ರದ ವೇದಿಕೆಯ ಮುಖ್ಯಸ್ಥರು ಭಾಗ ವಹಿಸಿ ಚರ್ಚೆ ನಡೆಸುವರು. ಇಲ್ಲಿ ಸಮಸ್ಯೆಗಳಿಗೆ ತಾಂತ್ರಿಕ ಪರಿಹಾರ ಮತ್ತು ಮಾರ್ಗದರ್ಶನಗಳನ್ನು ಎಲ್ಲರೂ ಕೂಡಿ ಸೂಚಿಸುವರು/ಪಡೆಯುವರು.

### ಕಾರ್ಯನಿರ್ವಹಣೆ

ನಿರ್ದೇಶಕರ ಮಂಡಳಿ ಸ್ವಿಫ್ಟನ್ನು ನಿರ್ವಹಿಸುತ್ತದೆ. ಪ್ರತಿ ಸದಸ್ಯ ಬ್ಯಾಂಕಿಗೆ ಅವನ ಬಳಕೆಯ ಗಾತ್ರಕ್ಕನುಗುಣವಾಗಿ ಷೇರನ್ನು ನೀಡಲಾಗುವುದು. ಮಂಡಳಿಯಲ್ಲಿ ಪ್ರತಿ ಸದಸ್ಯ ಬ್ಯಾಂಕಿನಿಂದ ಕನಿಷ್ಠ ಪಕ್ಷ ಒಬ್ಬ ಸದಸ್ಯರಿರುವರು. ಹೆಚ್ಚು ಬಳಸುವ ಬ್ಯಾಂಕಿಗೆ ಎರಡು ಸದಸ್ಯರನ್ನು ಹೊಂದುವ ಅವಕಾಶವಿದೆ. ಕಾರ್ಯನಿರ್ವಾಹಕ ಮಂಡಳಿಯ ಪ್ರಧಾನ ವ್ಯವಸ್ಥಾಪಕನ ನೇತೃತ್ವದಲ್ಲಿ ಕಾರ್ಯನಿರ್ವಹಣೆ ನಡೆಯುವುದು. ಮಂಡಳಿಯ ಛೇರ್ಮನ್ನರ ಅಡಿಯಲ್ಲಿ ಈ ಪ್ರಧಾನ ವ್ಯವಸ್ಥಾಪಕ ಕಾರ್ಯ ನಿರ್ವಹಿಸುವನು.

### ಸ್ವಿಫ್ಟ್ 2

ವಿಕೇಂದ್ರಿತ ನೆಟ್‌ವರ್ಕ್ ಕೌಶಲದ ಆಧಾರದ ಮೇಲೆ ವಿಂಗಡಿಸಿದ ವ್ಯವಹಾರ ಪ್ರಕ್ರಿಯೀಕರಣ ಅಭಿಗಮನವನ್ನು ಉಪಯೋಗಿಸುವ ಮತ್ತು ಇತ್ತೀಚಿನ ತಾಂತ್ರಿಕತೆಯನ್ನು ಒಳಗೊಂಡ ಒಂದು ಸುಧಾರಿತ ವ್ಯವಸ್ಥೆ ಅಭಿವೃದ್ಧಿಯ ಹಂತದಲ್ಲಿದೆ, ಈ ವ್ಯವಸ್ಥೆಯನ್ನು ಸ್ವಿಫ್ಟ್–2 ಎಂದು ಕರೆಯಲಾಗಿದೆ. 1977ರಿಂದ ಜಾರಿಯಲ್ಲಿರುವ ಈಗಿನ ಸ್ವಿಫ್ಟ್ ವ್ಯವಸ್ಥೆ ತನ್ನ ಜೀವಾವಧಿಯ ಕೊನೆಯ ಘಟ್ಟದಲ್ಲಿದೆ. ಅಲ್ಲದೆ ಅದು ಮಾಹಿತಿ ಗಾತ್ರನಿರ್ವಹಣೆಯ ಸಾಮರ್ಥ್ಯ ಮಿತಿಯನ್ನು ಮುಟ್ಟಿದೆ. ಸ್ವಿಫ್ಟ್–2 ವ್ಯವಸ್ಥೆ 1990ರಿಂದ ಜಾರಿಗೆ ಬರುವ ಸಾಧ್ಯವಿದೆ.

1990ರ ದಶಕದಲ್ಲಿ ಸ್ವಿಫ್ಟ್—ಎಲೆಕ್ಟ್ರಾನಿಕ್ ದತ್ತಾಂಶ ಪರಸ್ಪರ ವಿನಿಮಯ (Electronic Data Interchange-EDI). ಕಡತ ವರ್ಗಾವಣೆ (File Transfer), ಅಂತರ ಕ್ರಿಯಾತ್ಮಕ ಸೇವೆ, Interactive Service) ಮತ್ತು ವರ್ಧಿತ ಮೌಲ್ಯಸೇವೆಗಳು (Value Added Services) ಇವುಗಳನ್ನು ಒಳಗೊಳ್ಳುವ ಸೂಚನೆಗಳಿವೆ.

ಸ್ವಿಫ್ಟ್ ತನ್ನ ಸಹ ಸಂಸ್ಥೆಯ ಮೂಲಕ ನಿರ್ದಿಷ್ಟ ಸೇವೆಗಳಾದ ನಷ್ಟಹೊಣೆ ನಿರ್ವಹಣೆ (Risk Management) ಬಂಡವಾಳ ಮಾರುಕಟ್ಟೆ ಮತ್ತು ಇನ್ನಿತರ ಸೇವೆಗಳನ್ನು ವಿಶಿಷ್ಟ ವರ್ಗಗಳ ಸದಸ್ಯರಿಗೆ ನೀಡುವುದು.

ಭಾರತೀಯ ಬ್ಯಾಂಕುಗಳು ಸ್ವಿಫ್ಟ್ ಸದಸ್ಯತ್ವವನ್ನು ಪಡೆಯುವುದಕ್ಕೆ ಕಾತರದಿಂದಿವೆ. ಪ್ರಾದೇಶಿಕ ಪ್ರಕ್ರಿಯೀಕಾರಕ ಕೇಂದ್ರವನ್ನು ತೆರೆಯುವಲ್ಲಿ ಸರ್ಕಾರದಿಂದ ನಿರ್ದಿಷ್ಟ ರಹದಾರಿ ಸ್ವಿಫ್ಟ್‌ಗೆ ದೊರೆಯಬೇಕಿದೆ. ಭಾರತೀಯ ಬ್ಯಾಂಕುಗಳು ಸ್ವಿಫ್ಟ್‌ನ ಸದಸ್ಯತ್ವವನ್ನು ಪಡೆದವೆಂದರೆ ಎಲ್ಲ ರೀತಿಯ ಪ್ರಯೋಜನಗಳು ಅವಕ್ಕೂ ದೊರೆಯುವುವು: ಆ ಪ್ರಯೋಜನಗಳು ಹಲವು : ವೇಗ, ಅವಲಂಬನೆ, ಭದ್ರತೆ, ವಿಶ್ವಾದ್ಯಂತ ಸಂಪರ್ಕ, ಮತ್ತು ವೆಚ್ಚ—ಎಲ್ಲ ದೃಷ್ಟಿಯಿಂದಲೂ ಸ್ವಿಫ್ಟ್ ಉಪಯುಕ್ತ. 

# ಬ್ಯಾಂಕಿಂಗ್ ತರಬೇತಿ ವ್ಯವಸ್ಥೆ: ಭವಿಷ್ಯದ ಸವಾಲುಗಳು

**ಬದಲಾಗುತ್ತಿರುವ ಜಗತ್ತಿನಲ್ಲಿ ಶೀಘ್ರವಾಗಿ ಬೆಳೆಯುತ್ತ ಹೊಸ ಹೊಸ ನಿಟ್ಟುಗಳಲ್ಲಿ ಮುನ್ನಡೆಯುತ್ತಿರುವ ಬ್ಯಾಂಕುಗಳು ಬಹುಮುಖ ಕಾರ್ಯ ನಿರ್ವಹಿಸುವುದು ಸಾಧ್ಯವಾಗುವಂತೆ 'ವೃತ್ತಿಪರ' ದೃಷ್ಟಿಯ ಸಿಬ್ಬಂದಿಯನ್ನು ಸಜ್ಜುಗೊಳಿಸುವುದೂ ಬದಲಾವಣೆಗಳನ್ನು ಎದುರಿಸುವಂತೆ ಅವರನ್ನು ಶಕ್ತರನ್ನಾಗಿಸುವುದೂ ಇಂದಿನ ಅಗತ್ಯ. ಇಂಥ ಉದ್ದೇಶದ ತರಬೇತಿಗೆ ಹಲವು ಮುಖಗಳಿವೆ. ಇದರ ವಿಧಾನವೂ ಬೇರೆಯೇ.**

**ಕೆ. ಎನ್. ಮಹಾಬಲ**
ಭಾರತೀಯ ಸ್ಟೇಟ್ ಬ್ಯಾಂಕ್, ಕನ್ನಡ ವಿಭಾಗ
ಸ್ಥಳೀಯ ಪ್ರಧಾನ ಕಛೇರಿ, ಬೆಂಗಳೂರು

ಕಳೆದ ಇಪ್ಪತ್ತು ವರುಷಗಳಲ್ಲಿ ಬ್ಯಾಂಕಿಂಗ್ ವ್ಯವಸ್ಥೆ ಕಂಡಿರುವ ಪ್ರಗತಿ ಅದ್ಭುತವಾದ್ದು. ಶಾಖೆಗಳ ಸಂಖ್ಯೆಯಲ್ಲಿ ಏಳು ಪಟ್ಟು ಹೆಚ್ಚಳ, ಠೇವಣಿ ಮೊತ್ತದಲ್ಲಿ ಮೂವತ್ತು ಪಟ್ಟು ಹೆಚ್ಚಳ, ಉದರಿ ನೀಡಿಕೆಯಲ್ಲಿ 20ರಷ್ಟು ಪ್ರಗತಿ, ಗ್ರಾಹಕ ಸಂಖ್ಯೆಯಲ್ಲಿ ಹತ್ತು ಪಟ್ಟು ವೃದ್ಧಿ, ಸಿಬ್ಬಂದಿ ಸಂಖ್ಯೆಯಲ್ಲಿ ನಾಲ್ಕು ಪಟ್ಟು ಏರಿಕೆ—ಇಂಥ ಪರಿಮಾಣ ಸ್ವರೂಪೀ ಬೆಳವಣಿಗೆ ಅಸಾಮಾನ್ಯವಾದುದು.

ಸಿಬ್ಬಂದಿ ಸಂಖ್ಯೆಯ ವೃದ್ಧಿಯಂತೂ ಗಮನಾರ್ಹವಾದುದು. ಇಂದು ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ 2.5 ಲಕ್ಷ ಅಧಿಕಾರಿಗಳೂ, ಏಳು ಲಕ್ಷ ಗುಮಾಸ್ತ/ಅಧೀನ ಸಿಬ್ಬಂದಿಗಳೂ ಕಾರ್ಯನಿರತ.

ಈ ಅಂಕಿಅಂಶಗಳ ಅಗಾಧತೆಯ ಜತೆಗೆ ಬ್ಯಾಂಕುಗಳು ಕಾರ್ಯಪ್ರವೃತ್ತವಾಗಿರುವ ಪರಿಸರ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಸ್ವರೂಪದ್ದೂ ಅತ್ಯಂತ ಸ್ಪರ್ಧಾತ್ಮಕವೂ ಆಗಿದೆ. ನಿಧಿ ಕ್ರೋಡೀಕರಣ ಹಾಗೂ ಪುನರ್ವಿನಿಯೋಗದ ಜವಾಬ್ದಾರಿ ಗುರುತರಗೊಂಡಿದ್ದು ಇಡೀ ಬ್ಯಾಂಕಿಂಗನ್ನು ಇಂದು ಕೊಳ್ಳುವವರ ಮಾರುಕಟ್ಟೆಯಲ್ಲಿ ನಿಲ್ಲಿಸಿದೆ.

ಲಾಭಪ್ರದತೆ ಕಡಿಮೆಯಾಗುತ್ತಿರುವ ಈ ಪರಿಸ್ಥಿತಿಯಲ್ಲಿ ನಿಧಿ ಆಧಾರ ಹೊಂದಿಲ್ಲದ ಹೊಸ ಹೊಸ ಆದಾಯ ಮಾರ್ಗಗಳನ್ನು ರೂಢಿಸಿಕೊಳ್ಳುವುದು ಅನಿವಾರ್ಯವಾಗಿದೆ. ಅರ್ಥವ್ಯವಸ್ಥೆಯ ಕ್ಷಿಪ್ರ ಬದಲಾವಣೆಯಲ್ಲಿ ಉದರಿ ಕಾರ್ಡ್, ಪರಸ್ಪರ ನಿಧಿ, ವಿನಿಯೋಜನೆ ನಿರ್ವಹಣೆ. ಉಪಕ್ರಮ ಬಂಡವಾಳ, ವಸತಿ, ಗುತ್ತಿಗೆ ಕಾರ್ಯಾಚರಣೆ, ಕಂತು ಬಾಡಿಗೆ ಹಣಕಾಸು. ಮತ್ತು ಋಣಾಭಿಕರಣ ಇಂಥ ಹಲವು ಬಗೆಯ, ಕೆಲವೇ ವರ್ಷಗಳ ಹಿಂದೆ ಊಹಿಸಲೇ ಸಾಧ್ಯವಿಲ್ಲದಿದ್ದಂಥ, ಅನೇಕ ಹೊಸ ಮಾರ್ಗಗಳನ್ನು ಇಂದು ಬ್ಯಾಂಕುಗಳು ಅನ್ವೇಷಿಸುತ್ತಿವೆ. ಇದರೊಂದಿಗೆ, ತಂತ್ರಜ್ಞಾನದ ಬಳಕೆ,

ಆಧುನಿಕ ಸಂಪರ್ಕ ವ್ಯವಸ್ಥೆ, ಸ್ವಯಂಚಲೀಕರಣ ಮುಂತಾದ ಸುಧಾರಣೆಗಳಿಂದಾಗಿ ದೈನಂದಿನ ಕಾರ್ಯಾಚರಣೆಗಳು ಮಹತ್ತರ ಬದಲಾವಣೆಗಳನ್ನುಕಾಣುತ್ತಿವೆ. ವೇಗ, ಗುಣಮಟ್ಟ, ಸೌಕರ್ಯ ಮುಂತಾದ ದೃಷ್ಟಿಗಳಿಂದ ಗ್ರಾಹಕರ ನಿರೀಕ್ಷೆಗಳು ಒಂದೇ ಸಮನೆ ಹೆಚ್ಚುತ್ತಿವೆ. ಇವೆಲ್ಲದರ ಫಲವಾಗಿ :

1 ಉದ್ಯೋಗಿಯ ಉತ್ಪಾದಕತೆಯಲ್ಲಿ ಹೆಚ್ಚಳ ಸಾಧಿಸುವ ಅಗತ್ಯ,
2 ದೃಢವಾದ ಸಾಲ ಮಂಜೂರಾತಿ ಪೂರ್ವ ನಿರ್ಧಾರಣ ಹಾಗೂ ಮಂಜೂರಾತಿಯ ಅನಂತರದ ಪರಿಶೀಲನದ ಜತೆಗೆ ಅಸ್ವಸ್ಥ ಘಟಕಗಳು ಉತ್ಪಾದಕ ಕ್ರಿಯೆಯಲ್ಲಿ ತೊಡಗಲು ಅನುವುಮಾಡಿಕೊಡುವ ಕಾಲಬದ್ಧ ಮರುವಸತಿ ಕಾರ್ಯಕ್ರಮ,
3 ಬಡ್ಡೀತರ ಆದಾಯ ತರಬಲ್ಲ, ಆದರೆ ನಿಧಿ ಆಧಾರ ಹೊಂದಿಲ್ಲದ ವಿನಿಯೋಜನ ವಿಭಾಗದ ವಿಸ್ತಾರ,
4 ಕ್ರಿಯಾಶೀಲ ಹಾಗೂ ಹೊಸ ಬಗೆಯ ಯೋಜನೆ/ಸೇವೆ ಮಾರಾಟಗಾರಿಕೆ ತಂತ್ರಗಳನ್ನು ವಿಶೇಷ ಗ್ರಾಹಕ ವರ್ಗವನ್ನು ಆಕರ್ಷಿಸುವ ರೀತಿಯಲ್ಲಿ ಅಭಿವೃದ್ಧಿಪಡಿಸುವ ಅಗತ್ಯ.

—ಇಂಥ ವಿಶಿಷ್ಟಜವಾಬ್ದಾರಿಗಳು ಹೆಚ್ಚಾಗಿವೆ. ಈ ಎಲ್ಲ ಬಗೆಯ ಕೆಲಸ ನಿರ್ವಹಿಸಲು 'ವೃತ್ತಿಪರ' ದೃಷ್ಟಿಯ ಸಿಬ್ಬಂದಿಯನ್ನು ಸಜ್ಜುಗೊಳಿಸುವುದು, ಅವರ ತರಬೇತಿ, ಅವರಿಗೆ ಉತ್ತೇಜನ ನೀಡಿಕೆ—ಇವೇ ಅಲ್ಲದೆ, ಸಾಮಾನ್ಯ ಬ್ಯಾಂಕಿಂಗ್ ವಲಯದಲ್ಲಿ ಕಂಡುಬರುತ್ತಿರುವ ಬದಲಾವಣೆಗಳನ್ನು ಎದುರಿಸಲು ಅವರನ್ನು ಶಕ್ತರನ್ನಾಗಿಸುವುದೂ ಇಂದಿನ ಅಗತ್ಯವಾಗಿದೆ. ಮುಖ್ಯವಾಗಿ ಬ್ಯಾಂಕಿನ ತರಬೇತಿ ವ್ಯವಸ್ಥೆಗೇ ಹೊಸ ರೂಪವೊಂದನ್ನು ನೀಡಬೇಕಾಗಿದೆ. ಸಂಸ್ಥೆಯ ಮಾನವ ಸಂಪನ್ಮೂಲ ಅಭಿವೃದ್ಧಿ ವಿಭಾಗದ ಉಪವ್ಯವಸ್ಥೆಯಾಗಿ ತರಬೇತಿ ರೂಪುಗೊಂಡಾಗ ಮಾತ್ರ ಈ ಬದಲಾವಣೆ ಸಾಧ್ಯವಾಗಬಹುದು.

### ತರಬೇತಿಯ ಮಹತ್ವ

ತರಬೇತಿ ವ್ಯವಸ್ಥೆಯ ಮುಖ್ಯ ಉದ್ದೇಶ ಸಿಬ್ಬಂದಿಗೆ ಈ ದಿಸೆಗಳಲ್ಲಿ ತರಬೇತಿ ನೀಡುವುದೇ ಆಗಿದೆ (ಚಿತ್ರ ನೋಡಿ) :

1 ಕಾರ್ಯಾಚರಣೆಯ ಕ್ಷೇತ್ರ,
2 ಮಾನವ ಸಂಪನ್ಮೂಲ ಅಭಿವೃದ್ಧಿ
3 ವೈಯಕ್ತಿಕ ಅಭಿವೃದ್ಧಿ ಕ್ಷೇತ್ರ

ಎಲ್ಲಾ ತರಬೇತಿ ಕಾರ್ಯಕ್ರಮಗಳೂ ಅಗತ್ಯವನ್ನು ಆಧರಿಸಿ ಇರುವುದು ವಿಹಿತ. ಕೆಳಹಂತದ ಕಾರ್ಯಾಚರಣೆಯ ಮಟ್ಟದಿಂದ ಮೇಲಿನ ತರಬೇತಿಯ ಮಟ್ಟಕ್ಕೆ ಚಲಿಸುವಂತಿರಬೇಕು. ಮತ್ತು ಈ




**ವೈಯುಕ್ತಿಕ ಅಭಿವೃದ್ಧಿ ಪ್ರಯೋಗಶಾಲೆ**
**ಕ್ರಿಯಾಶೀಲತೆ ಮತ್ತು ಸಮಸ್ಯೆಯ ಪರಿಹಾರ**
**ಒತ್ತಡ ನಿರ್ವಹಣೆ**
**ಸಮಯ ನಿರ್ವಹಣೆ**
**ಆಂತರಿಕ–ವ್ಯಕ್ತಿ ಸಂಬಂಧ**
**ವ್ಯಕ್ತಿತ್ವ ಬೆಳವಣಿಗೆ**
**ಸಂವಹನ**

**ವರ್ತನ ವಿಜ್ಞಾನ**
**ಮಾನವ ಸಂಪನ್ಮೂಲ ಅಭಿವೃದ್ಧಿ**
**ವ್ಯವಸ್ಥಾಪನ ಅಭಿವೃದ್ಧಿ**
**ವ್ಯವಹಾರ ಅಭಿವೃದ್ಧಿ ಹಾಗೂ ಅಂತರವ್ಯಕ್ತಿ ಅರಿವು**
**ಮುಂದಾಳತ್ವ ಕೌಶಲ**
**ಮೇಲ್ವಿಚಾರಣಾ ಕೌಶಲ**
**ಮಾರಾಟಗಾರಿಕೆ ಕೌಶಲ**
**ಪರಿಣಾಮಕಾರಿ ವ್ಯವಸ್ಥಾಪನ ಕೌಶಲ**

**ಉದರಿ ನಿರ್ವಹಣೆ**
**ಉದರಿ ನಿರ್ಧಾರಣ**
**ದಸ್ತಾವೇಜು, ಕಾನೂನಿನ ಅಂಶಗಳು**
**ಉದರಿ ಖಾತರಿ ಯೋಜನೆ**
**ಆದ್ಯತಾವಲಯ ಸರ್ಕಾರದ ಸಾಲಯೋಜನೆ**
**ನಿರೀಕ್ಷಣೆ, ಲೆಕ್ಕಪರಿಶೋಧನೆ, ಅನುಪಾಲನೆ**
**ಹಣ, ಹುಂಡಿ, ಬಂಡವಾಳ ಮಾರುಕಟ್ಟೆ**
**ಹೊಸ ಆರ್ಥಿಕ ಯೋಜನೆಗಳು**
**ಪರಸ್ಪರ ನಿಧಿ, ವಿನಿಯೋಜನ ನಿರ್ವಹಣೆ, ಗುತ್ತಿಗೆ**
**ವಸತಿ, ಕಂತುಬಾಡಿಗೆ, ಗ್ರಾಹಕ ಉಪಕರಣ**
**ಉಪಕ್ರಮ ಬಂಡವಾಳ, ಋಣಾಭಿಕರಣ**
**ರಫ್ತು ಹಣಕಾಸು**

ಕಾರ್ಯ ನಿರಂತರವಾಗಿ ನಡೆಯುವಂತಹ ವ್ಯವಸ್ಥೆಯಿರಬೇಕು. ಉದ್ಯೋಗಿಗಳನ್ನು ಅಲ್ಲಲ್ಲಿ ಸಂದರ್ಶಿಸುವುದರ ಮೂಲಕ, ಶಾಖಾ ವ್ಯವಸ್ಥಾಪಕ, ಪ್ರಾದೇಶಿಕ ವ್ಯವಸ್ಥಾಪಕ, ವಲಯ ವ್ಯವಸ್ಥಾಪಕರು ಮತ್ತು ಇತರ ಉನ್ನತಾಧಿಕಾರಿಗಳನ್ನು ಸಂಪರ್ಕಿಸಿ ತರಬೇತಿ ಕಾರ್ಯಕ್ರಮದ ವ್ಯಾಪ್ತಿ ಹಾಗೂ ವಿಷಯವನ್ನು ಸಿದ್ಧಪಡಿಸುವುದು ಅಗತ್ಯ.ಅಂತೆಯೇ ತರಬೇತಿ ಕಾರ್ಯಕ್ರಮಗಳಿಗೆ ನಿರ್ದಿಷ್ಟ ಉದ್ದೇಶವಿರುವಂತೆ ಎಚ್ಚರ ವಹಿಸುವುದೂ ಅಷ್ಟೇ ಅಗತ್ಯ.

ಬ್ಯಾಂಕಿಂಗ್ ತರಭೇತಿ ವ್ಯವಸ್ಥೆ ಶಾಲಾ ಕಾಲೇಜುಗಳ ಬೋಧನೆಗಳಿಗಿಂತ ಭಿನ್ನ. ಶಾಲಾ ಕಾಲೇಜುಗಳಲ್ಲಿ ಜ್ಞಾನ ನೀಡುವುದೇ ಪ್ರಧಾನವಾಗಿದ್ದರೆ, ತರಬೇತಿಯಲ್ಲಿ ಕೌಶಲ ಉತ್ತಮಗೊಳಿಸಿಕೊಳ್ಳುವುದು, ದೃಷ್ಟಿಕೋನದ ಬೆಳವಣಿಗೆ, ಭವಿಷ್ಯದೃಷ್ಟಿ, ಅಭಿಗಮನಗಳಿಗೆ ಹೆಚ್ಚಿನ ಮಹತ್ವ. ಉಪದೇಶದ ಮಾದರಿಯ ತರಬೇತಿಗೆ ಅವಕಾಶವಿಲ್ಲದಂತೆ ಅನುಭವನಿರೂಪಣೆ, ಅಭಿಪ್ರಾಯ ವಿನಿಮಯಗಳಿಗೆ ಕೇಂದ್ರದ ಗಮನವಿರುವುದು ಅಗತ್ಯ. ಉದ್ಯೋಗಿಗಳು ಈಗಾಗಲೇ ತಮ್ಮನ್ನು ಕಾರ್ಯಕ್ಷೇತ್ರದಲ್ಲಿ ತೊಡಗಿಸಿಕೊಂಡಿರುವುದರಿಂದ, ಭವಿಷ್ಯದಲ್ಲಿ ತರಬೇತಿ ಪಡೆಯುವವರಿಗೆ ಸಮೂಹ ಚರ್ಚೆ, ಪ್ರಕರಣ ಅಧ್ಯಯನ ಇಂಥ ಮಾರ್ಗಗಳಿಂದ ತರಬೇತಿ ನೀಡುವುದು ಉಪಯುಕ್ತ. ಇದರೊಂದಿಗೆ

1 ದೃಶ್ಯ-ಶ್ರವಣ ಮಾಧ್ಯಮದ ಬಳಕೆ, ದೈನಂದಿನ ಕಾರ್ಯಾಚರಣೆಯಲ್ಲಿ ಬಳಸುವ ಗಣಕದ ತಾಂತ್ರಿಕಾಂಶಗಳ (Software) ಉಪಯುಕ್ತತೆಯ ಪರಿಚಯ,
2 ಗಣಕ ಯಂತ್ರದ ಬಳಕೆಯ ಕಲಿಕೆ,
3 ನಾಜೂಕು ವಿನ್ಯಾಸದ ವ್ಯವಸ್ಥಾಪನ ಕ್ರೀಡೆಗಳ ಉಪಯೋಗ,
4 ಕಾರ್ಯಕ್ಷೇತ್ರ, ನಡೆವಳಿಕೆ ವಿಜ್ಞಾನ, ಮಾನವ ಸಂಪನ್ಮೂಲ ಅಭಿವೃದ್ಧಿ ಕ್ಷೇತ್ರದಿಂದ, ಕ್ಲಿಷ್ಟವಾದ ಹಾಗೂ ಪ್ರಾಯೋಗಿಕವಾದ ಪ್ರಕರಣ ಅಧ್ಯಯನಗಳು,
ಸೂಕ್ಷ್ಮಸಂವೇದೀ (sensitivity) ತರಬೇತಿ ವ್ಯವಸ್ಥೆ (ಭವಿಷ್ಯದಲ್ಲಿ ಇದು ಹೆಚ್ಚು ಪ್ರಾಧಾನ್ಯ ಪಡೆಯುವ ಸಂಭವವಿದೆ),
ಸ್ವಯಂ ಕಲಿಕೆ ವಿಧಾನಗಳು,
ಪಾತ್ರ ನಿರ್ವಹಣೆ (Role play),
ಪ್ರಶ್ನೆಗಳ ಬ್ಯಾಂಕ್,
ಪ್ರಶ್ನೋತ್ತರ ಕ್ರಿಯೆ (Quiz).

ತರಬೇತಿಯ ನಿಜವಾದ ಸಾರ್ಥಕತೆ ಕಂಡುಬರುವುದು ಕಾರ್ಯ ನಿರ್ವಹಿಸುವವರ ಅಗತ್ಯಗಳಿಗೆ ತಕ್ಕಂಥ ತರಬೇತಿ ನೀಡುವುದೇ ಆಗಿದೆ. ಆದ್ದರಿಂದ ತರಬೇತಿಗೂ ನಿರ್ವಹಿಸುವ ಕೆಲಸಕ್ಕೂ ನೇರವಾದ ಸಂಬಂಧವಿರಬೇಕು. ಪ್ರಸ್ತುತ ಶೇ. 40ರಷ್ಟು ಉದ್ಯೋಗಿಗಳು ಮಾತ್ರ ತರಬೇತಿಯಲ್ಲಿ ಪಡೆದ ಜ್ಞಾನವನ್ನು ವಾಸ್ತವವಾಗಿ ಕೆಲಸದಲ್ಲಿ ಬಳಸಲು ಸಾಧ್ಯವಾಗಿದೆ. ಹೀಗಾಗಿ ಬ್ಯಾಂಕುಗಳು ಈ ನಿಟ್ಟಿನಲ್ಲಿ ದುಡಿಯುವುದು ತರಬೇತಿ ವ್ಯವಸ್ಥೆಯ ಉಪಯುಕ್ತತೆಯ ದೃಷ್ಟಿಯಿಂದ ಅತ್ಯಗತ್ಯವಾಗಿದೆ.

ಈ ಎಲ್ಲ ಅಂಶಗಳ ಜತೆಗೆ ಭವಿಷ್ಯದಲ್ಲಿ ನಾವು ಗಮನ ನೀಡಬೇಕಾಗಿರುವ ತರಬೇತಿ ತಂತ್ರಗಳನ್ನು ಹೀಗೆ ವಿವರಿಸಬಹುದು :

## ಉಸ್ತುವಾರಿ ವ್ಯವಸ್ಥೆ

ಭವಿಷ್ಯದಲ್ಲಿನ ಬ್ಯಾಂಕಿಂಗ್ ರಂಗದ ತರಬೇತಿಯ ಅಗತ್ಯವನ್ನು ಗುರುತಿಸುವುದು ಅಷ್ಟೇನೂ ಕಷ್ಟವಾಗಲಾರದು. ತರಬೇತಿ ಪಡೆಯಬೇಕಾಗಿರುವ ಉದ್ಯೋಗಿಗಳ ಸಂಖ್ಯೆ, ವೆಚ್ಚದ ವಿವರ, ಕಾರ್ಯಕ್ರಮ ವ್ಯಾಪ್ತಿ, ಕ್ಷೇತ್ರ—ಇವೆಲ್ಲದರ ದೃಷ್ಟಿಯಿಂದ ಎಲ್ಲ ಬ್ಯಾಂಕುಗಳಿಗೂ ಅನ್ವಯವಾಗುವ ಒಂದು ಉಸ್ತುವಾರಿ ವ್ಯವಸ್ಥೆಯನ್ನು ಹೊಂದುವುದು ಅಪ್ರಸ್ತುತವಾಗಲಾರದು. ವ್ಯಾಸಂಗ ಕ್ರಮ, ಬೋಧನಾಕ್ರಮ, ತರಬೇತಿ ಕಾರ್ಯಕ್ರಮದ ವಿಷಯ, ಅವಧಿ, ಮೌಲ್ಯನಿರ್ಧಾರಣಾ ಪ್ರಕ್ರಿಯೆ, ಇಂಥ ಅಗತ್ಯಗಳಿಗೆ ಅನುಗುಣವಾದ ತರಬೇತಿ ಮುಂತಾದ ಅಂಶಗಳನ್ನೂ ಗಮನಿಸಬಹುದು. ಇಂಥ ವ್ಯವಸ್ಥೆಯಿಂದ ವೆಚ್ಚದಲ್ಲಿ ಮಿತವ್ಯಯ ಸಾಧಿಸಲೂ ಸಾಧ್ಯವಾಗುತ್ತದೆ.

## ಬೋಧನಾ ಸಿಬ್ಬಂದಿ ಅಭಿವೃದ್ಧಿ

ಹಾಲಿ ಕೆಲಸ ನಿರ್ವಹಿಸುತ್ತಿರುವ ಬೋಧನಾ ಸಿಬ್ಬಂದಿಯ ಜ್ಞಾನವನ್ನು ಉತ್ತಮಪಡಿಸುವುದರ ಜತೆಗೆ ಕ್ಷಿಪ್ರವಾಗಿ ಪ್ರಗತಿ ಹೊಂದುತ್ತಿರುವ ಬ್ಯಾಂಕಿಂಗ್ ವ್ಯವಸ್ಥೆಯು ವಿಶೇಷೀಕೃತ ಜ್ಞಾನ ಹೊಂದಿದ ಸಿಬ್ಬಂದಿಯನ್ನು ಹೊಂದುವುದೂ ಇಂದಿನ ಅಗತ್ಯವಾಗಿದೆ.

## ಸಂಶೋಧನೆ ಸಲಹಾ ವ್ಯವಸ್ಥೆ

ಬ್ಯಾಂಕಿಂಗ್ ವ್ಯವಸ್ಥೆಯು ಅಗಾಧ ಸಂಪನ್ಮೂಲಗಳನ್ನೂ ಅಧೋರಚನಾ ವ್ಯವಸ್ಥೆಯ ಜಾಲವನ್ನೂ ಹೊಂದಿರುವುದರಿಂದ ಕ್ರಿಯಾ ಯೋಜನೆ, ಸಲಹಾ ಸೇವೆ, ಸಂಶೋಧನೆ ಮುಂತಾದ ಕ್ಷೇತ್ರಗಳಲ್ಲಿ ಹೆಚ್ಚು ಹೆಚ್ಚು ತೊಡಗಿಸಿಕೊಳ್ಳಬೇಕು. ಇದರಿಂದ ಸಂಸ್ಥೆಗೆ ಪ್ರಯೋಜನ ಮಾತ್ರವಲ್ಲದೆ, ತರಬೇತಿ ಪಡೆಯುವವರ, ತರಬೇತಿ ಮಟ್ಟದ ಗುಣಮಟ್ಟ ಹೆಚ್ಚಲು ಕಾರಣವಾಗುತ್ತದೆ.

## ಗ್ರಾಮೀಣ ಅನುಸ್ಥಾಪನ

ಗ್ರಾಮೀಣ ಸೇವೆಗೆ ಮಹತ್ವದ ಪಾತ್ರವಿರುವ ಈ ದಿನಗಳಲ್ಲಿ, ಸೇವಾ ಕ್ಷೇತ್ರ ಅಭಿಗಮನ ಜಾರಿಯಾಗುತ್ತಿರುವ ಸಂದರ್ಭದಲ್ಲಿ ಗ್ರಾಮೀಣ ತರಬೇತಿ/ಸಂಶೋಧನೆಗೂ ವಿಶೇಷ ಗಮನ ನೀಡುವುದಗತ್ಯ. ಕೋಳಿ ಸಾಕಣೆ, ಹೈನುಗಾರಿಕೆ, ಮೀನುಗಾರಿಕೆ, ರೇಷ್ಮೆ ಕ್ಷೇತ್ರ ಮುಂತಾದುವನ್ನು ಹೊಂದಿದ ಸಮಗ್ರ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯೊಂದನ್ನು ಸ್ಥಾಪಿಸುವುದನ್ನು ಪರಿಶೀಲಿಸಬಹುದು. ವೆಚ್ಚ ದುಬಾರಿಯಾಗುವಂತಿದ್ದಲ್ಲಿ ಎರಡು ಮೂರು ಬ್ಯಾಂಕುಗಳು ಸೇರಿ ಸ್ಥಾಪಿಸಬಹುದು.

## ಸಮುದಾಯ ಆಧಾರಿತ ತರಬೇತಿ ಕಾರ್ಯಕ್ರಮ

ಇಂದಿನ ದಿನಗಳಲ್ಲಿ ವಾಣಿಜ್ಯಬ್ಯಾಂಕುಗಳು ಸಮಾಜದ ವಿವಿಧ ವರ್ಗಗಳಾದ ಪರಿಶಿಷ್ಟ ಜಾತಿ/ಪಂಗಡ, ಮಾಜಿ ಸೈನ್ಯ ಸಿಬ್ಬಂದಿ, ಅಂಗವಿಕಲರು, ಅಲ್ಪ-ಸಂಖ್ಯಾತರು, ಮಹಿಳಾ ಉದ್ಯಮಿಗಳು, ಪದವೀಧರರು ಹೀಗೆ ಸಮಾಜದ ವಿಭಿನ್ನ ಸಮೂಹಗಳೊಡನೆ ಸಂಪರ್ಕ ಹೊಂದಬೇಕಾಗುತ್ತದೆ. ಇವರೊಡನೆ ಸೇರಿ ತರಬೇತಿ ಕಾರ್ಯಕ್ರಮ ಏರ್ಪಡಿಸಬೇಕಾಗುತ್ತದೆ. ಮುಂಬರುವ ದಿನಗಳಲ್ಲಿ ಬ್ಯಾಂಕ್ ವಯಸ್ಕ ಶಿಕ್ಷಣ ಯೋಜನೆಯನ್ನು ಹಮ್ಮಿಕೊಳ್ಳುವ ಸಂದರ್ಭ ಬಂದರೂ ಆಶ್ಚರ್ಯವಿಲ್ಲ. ಬ್ಯಾಂಕಿಂಗ್ ವ್ಯವಸ್ಥೆ ಇಂಥ ಚಟುವಟಿಕೆಗಳನ್ನೂ ಎದುರಿಸಲು ಸನ್ನದ್ಧರಾಗುವಂತೆ ಮಾಡುವುದು ಖಚಿತವಾಗಿದೆ.

## ಆಧುನಿಕೀಕರಣ

ಗಣಕೀಕರಣ/ಸ್ವಯಂಚಲೀಕರಣಗಳು ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಬೇರೂರುತ್ತಿರುವ ಈ ದಿನಗಳಲ್ಲಿ ಉದ್ಯೋಗಿಗಳನ್ನು ಈ ದಿಸೆಯಲ್ಲಿ ತರಬೇತಿಗೊಳಿಸುವುದೂ ಅಗತ್ಯವಾದ ಕಾರ್ಯವಾಗಿದೆ.

## ಸ್ಥಳದಲ್ಲಿ ತರಬೇತಿ ನೀಡಿಕೆ

ಮುಂಬರುವ ದಿನಗಳಲ್ಲಿ ಉದ್ಯೋಗಿಗಳಿಗೆ ಅವರು ಕೆಲಸ ಮಾಡುವ ಪರಿಸರದಲ್ಲೇ ತರಬೇತಿ ನೀಡುವ ಕ್ರಿಯೆಯೂ ಮಹತ್ವದ ಪಾತ್ರ ವಹಿಸಲಿದೆ. ಇಂಥ ಸಂಚಾರಿ ತರಬೇತಿ ಕಾರ್ಯಕ್ರಮಗಳು ಉದ್ಯೋಗಿಗಳಿಗೆ ತಮ್ಮ ಕಾರ್ಯ ಪರಿಸರಕ್ಕೆ ಹೊಂದಿಕೊಳ್ಳಲು ಅನುವು ಮಾಡಿಕೊಡುತ್ತದೆ.

## ಅಂಚೆ ತೆರಪು ಶಿಕ್ಷಣ

ತರಬೇತಿ ಕೇಂದ್ರದಲ್ಲಿ ತರಬೇತಿ ಪಡೆಯಲು ಸಾಧ್ಯವಾಗದ ಉದ್ಯೋಗಿಗಳಿಗೆ ಅವರು ಕೆಲಸ ಮಾಡುವೆಡೆಯಲ್ಲೇ ತರಬೇತಿ ನೀಡುವುದನ್ನೂ ಯೋಜಿಸಬಹುದು. ಉದ್ಯೋಗಿಗಳಿಗೆ ಪಾಠಗಳನ್ನೂ, ಟಿಪ್ಪಣಿಗಳನ್ನೂ ಅಂಚೆ ಮೂಲಕ ಕಳುಹಿಸಿಕೊಡಲಾಗುವುದು. ಅವರು ಬೋಧಕರೊಡನೆ ಅಂಚೆ ಮೂಲಕ ಸಮಾಲೋಚನೆ ನಡೆಸಬಹುದು.

## ಮಾನವ ಸಂಪನ್ಮೂಲ ಅಭಿವೃದ್ಧಿ

ಬ್ಯಾಂಕಿಂಗ್ ಜನಪ್ರಧಾನ ಚಟುವಟಿಕೆಯಾದ್ದರಿಂದ ಸಂಸ್ಥೆಯ ಸಾರ್ಥಕ ಅಸ್ತಿತ್ವಕ್ಕೆ ಮಾನವ ಸಂಪನ್ಮೂಲ ಅಭಿವೃದ್ಧಿ ನೇರವಾದ ಪಾತ್ರವನ್ನು ವಹಿಸುತ್ತದೆ. ಉದ್ಯೋಗಿಯ ಮನಸ್ಥೈರ್ಯ, ಆಸಕ್ತಿಗಳನ್ನು ಪ್ರೋತ್ಸಾಹಿಸಬೇಕಾಗುತ್ತದೆ. ಬ್ಯಾಂಕಿಂಗ್ ಒಂದು ಸಮೂಹ ಚಟುವಟಿಕೆ ಎಂಬುದು ಈಗಾಗಲೇ ಸಿದ್ಧವಾಗಿರುವು

[6ನೇ ಪುಟದ 2ನೇ ಕಾಲಂ ನೋಡಿ]

# ಬ್ಯಾಂಕುಗಳ ಲಾಭಪ್ರದತೆಯನ್ನು ಉತ್ತಮಗೊಳಿಸಲು ಸಲಹೆಗಳು

**ವ್ಯಯ ಮೂಲಗಳ ಏರಿಕೆ ಹಾಗೂ ಆದಾಯ ಮೂಲಗಳ ಇಳಿಕೆ—ಹೀಗೆ ಬ್ಯಾಂಕುಗಳ ಎರಡು ಕೆನ್ನೆಗಳಿಗೂ ಬಲವಾದ ಏಟು ಬಿದ್ದಿರುವ ಈಗಿನ ಸಂದರ್ಭದಲ್ಲಿ ಲಾಭ ಗಳಿಸುವ ಮಾತಿರಲಿ, ಈ ನೋವಿನಿಂದ ಚೇತರಿಸಿಕೊಳ್ಳುವ ಉಪಾಯವನ್ನು ಕುರಿತು ಯೋಚಿಸಬೇಕಾಗಿದೆ.**

**ಕಬ್ಬಿನಾಲೆ ವಸನ್ತ ಭಾರದ್ವಾಜ್**
**ಪ್ರಧಾನ ಕಾರ್ಯದರ್ಶಿ**
**ಬ್ಯಾಂಕರುಗಳ ಸಾಂಸ್ಕೃತಿಕ ಅಕಾಡೆಮಿ**
**ಹಾಸನ 573 201**

ಭಾರತದ ಪ್ರಮುಖ ಬ್ಯಾಂಕುಗಳ ರಾಷ್ಟ್ರೀಕರಣವಾಗಿ ಇಪ್ಪತ್ತು ವರ್ಷಗಳು ಮುಗಿದಿವೆ. ಸರ್ಕಾರಿ ಕ್ಷೇತ್ರದ 28 ಬ್ಯಾಂಕುಗಳೂ ಸೇರಿ ದೇಶದ ಸುಮಾರು 275 ಬ್ಯಾಂಕುಗಳು ಲಾಭ ಗಳಿಸುತ್ತಿವೆಯೆಂದು ಹೇಳಲಾಗುತ್ತಿದೆ. ಆರ್ಥಿಕ ಚಿಂತನೆಯಿಲ್ಲದ, ಬ್ಯಾಂಕಿಂಗ್ ವಿಚಾರಧಾರೆಯ ಅರಿವಿಲ್ಲದ ಜನಸಾಮಾನ್ಯರು ಮಾತ್ರವಲ್ಲ, ದೇಶದ ಅರ್ಥಶಾಸ್ತ್ರಜ್ಞರಿಂದ ಹಿಡಿದು ಅರ್ಥಮಂತ್ರಿಗಳ ವರೆಗೂ, ಬ್ಯಾಂಕುಗಳ ನಿಜವಾದ ಲಾಭಾಂಶ ಎಷ್ಟು ಎಂಬ ಪರಿಕಲ್ಪನೆ ಹೊಂದದಿರುವುದೂ ವಿಷಾದದ ವಿಚಾರ. ಪ್ರತಿ ವರ್ಷ ವಿವಿಧ ಬ್ಯಾಂಕುಗಳು ಪ್ರಕಟಿಸುವ ಆಯವ್ಯಯ, ಲಾಭನಷ್ಟ ಹಾಗೂ ಆಸ್ತಿ ಹೊಣೆಗಳ ಪಟ್ಟಿಯನ್ನು ಗಮನಿಸಿದರೆ. ಅವೆಲ್ಲ ಅಧಿಕ ಲಾಭ ಗಳಿಸುತ್ತವೆಯೆಂದು ಅನಿಸುವುದು ಸಹಜ. ಆದರೆ ನಿಜವಾಗಿಯೂ ಅಷ್ಟೊಂದು ಲಾಭ ಉಂಟಾಗುತ್ತಿದೆಯೆ ಎಂಬುದು ನಮ್ಮನ್ನು ಕಾಡುತ್ತಿರುವ, ಕಾಡಬೇಕಾದ ಮುಖ್ಯ ಪ್ರಶ್ನೆ. ಬ್ಯಾಂಕುಗಳ ಆಸ್ತಿ ಹೊಣೆ ಪಟ್ಟಿಯಲ್ಲಿ ವ್ಯಕ್ತವಾಗುವ ಲಾಭ ಎಷ್ಟು ಸಮರ್ಪಕವಾದುದೆಂಬುದು, ಎಲ್ಲರಿಗೂ ಗೊತ್ತಿದೆ. ವರ್ಷದಿಂದ ವರ್ಷಕ್ಕೆ ಲಾಭಾಂಶದ ಅಂಕಿ-ಅಂಶಗಳು ಮೊದಲೇ ಗೊತ್ತುಮಾಡಿಕೊಂಡ ಅಂಕಿಗೆ ಏರಬೇಕೆಂಬ ಲೆಕ್ಕಾಚಾರದಿಂದ, ಇತರ ಬ್ಯಾಂಕುಗಳಿಗಿಂತ ತಮ್ಮ ಬ್ಯಾಂಕ್ ಇಷ್ಟು ಹೆಚ್ಚು ಲಾಭ ಗಳಿಸಿದೆ ಎಂದು ಡಂಗುರ ಸಾರುವ ಚಾಪಲ್ಯದಿಂದ, ಈ ಲಾಭಗಳಿಕೆಯ ಪ್ರಕಟಣೆಯ ಹುನ್ನಾರ ನಡೆದಿದೆ.

ಬ್ಯಾಂಕುಗಳ ಒಟ್ಟು ತಗಾದೆ ಮತ್ತು ಸಾವಧಿ ಠೇವಣಿಗಳಲ್ಲಿ ಶೇ. 15ರಷ್ಟು ಹಣವನ್ನು ನಗದು ಮೀಸಲು ರೂಪದಲ್ಲಿಯೂ ಶೇ. 38ನ್ನು ಪರಿನಿಯತ ದ್ರವತ್ವ ಆಸ್ತಿಗಳ ರೂಪದಲ್ಲಿಯೂ, ಬ್ಯಾಂಕುಗಳು ಇಡಬೇಕಾಗುತ್ತದೆ. ಹಾಗಾಗಿ ಬ್ಯಾಂಕುಗಳ ವ್ಯವಹಾರಕ್ಕೆ ಕೇವಲ ಶೇ. 47ರಷ್ಟು ಠೇವಣಿಗಳು ಮಾತ್ರ ಉಳಿಯುತ್ತವೆ ಇದರಲ್ಲೂ ರಿಸರ್ವ್‌ಬ್ಯಾಂಕಿನ ಕೆಲವು ನಿರ್ದಿಷ್ಟ ನಿರ್ದೇಶನಗಳನ್ನು ಪಾಲಿಸಬೇಕಾಗಿದೆ. ಶೇ. 8ರಷ್ಟನ್ನು ಆಹಾರಧಾನ್ಯ ಸಂಗ್ರಹಣೆಗಾಗಿ, ಶೇ. 4ನ್ನು ರಫ್ತು ವ್ಯವಹಾರಕ್ಕಾಗಿ, ಶೇ. 24ನ್ನು ಆದ್ಯತಾರಂಗಗಳಿಗಾಗಿ ಶೇ. 1ನ್ನು ಭಿನ್ನಕ ಬಡ್ಡಿ ದರದ ಸಾಲಕ್ಕಾಗಿ ವಿನಿಯೋಜಿಸಬೇಕಾಗಿದೆ. ಅಷ್ಟೇ ಅಲ್ಲ, ಅವನ್ನು ನಿಗದಿಪಡಿಸಿದ ಬಡ್ಡಿದರದಲ್ಲೇ ಕೊಡಬೇಕಾಗಿದೆ. ಹಾಗಾಗಿ ಇದರಿಂದ ಲಾಭ ಉಂಟಾಗುವ ಸಾಧ್ಯತೆಯೇ ಇಲ್ಲವೆನ್ನಬಹುದು. ಶೇ. 47ರಲ್ಲಿ ಶೇ. 37ರಷ್ಟು ಹೀಗೆ ವಿನಿಯೋಜನೆಗೊಂಡರೆ, ಉಳಿದ ಶೇ. 10ನ್ನು ಲಾಭ ಗಳಿಕೆಯ ನಿಟ್ಟಿನಲ್ಲಿ ತೊಡಗಿಸಬಹುದಾಗಿದೆ. ಬೃಹತ್ ಕೈಗಾರಿಕಾರಂಗಕ್ಕೆ ಸಾಲ ನೀಡಿದಲ್ಲಿ ಮಾತ್ರ ಸ್ವಲ್ಪಮಟ್ಟಿನ ಲಾಭಗಳಿಸಬಹುದು. ಆದರೆ ಈ ಸಾಲ ಕೂಡ ರಿಸರ್ವ್ ಬ್ಯಾಂಕ್ ನಿಗದಿಪಡಿಸಿದ ಶೇ. 17.5ರ ಬಡ್ಡಿ ದರದಲ್ಲೇ ಇರಬೇಕು. ಪ್ರತಿಯೊಂದಕ್ಕೂ ಬಿಗಿಯಾದ ಕಟ್ಟುಪಾಡುಗಳೇ ಇರುವಾಗ, ಬ್ಯಾಂಕುಗಳು ಲಾಭ ಗಳಿಸುವುದಾದರೂ ಹೇಗೆ ?

ಕೈಗಾರಿಕಾ ಬ್ಯಾಂಕ್ ಹಾಗೂ ರಾಷ್ಟ್ರೀಯ ಕೃಷಿ ಬ್ಯಾಂಕುಗಳ ಪುನರ್ಧನ ಸೌಲಭ್ಯವನ್ನು ಇಲ್ಲಿ ಗಮನಕ್ಕೆ ತೆಗೆದುಕೊಂಡರೂ ಬ್ಯಾಂಕುಗಳ ಮುಂಗಡಗಳ ಒಟ್ಟು ಫಲಿತ ಕೇವಲ ಶೇ. 13.5 ಆಗುತ್ತದೆ. ವಿವಿಧ ಠೇವಣಿಗಳ ನಿಧಿ ನಿರ್ವಹಣೆಯ ವೆಚ್ಚ ಸುಮಾರು ಶೇ. 7.5 ಆಗುವ ಸಾಧ್ಯತೆಯಿದೆ. ಹಾಗಾದರೆ ಇಲ್ಲಿರುವ ಲಾಭಕಾರಕ ಬಡ್ಡಿಯ ಹರಹು ಕೇವಲ ಶೇ. 3 ಮಾತ್ರ. ಇದರಿಂದ ಶೇ. 2.5 ಸಿಬ್ಬಂದಿ ವೆಚ್ಚ ಕಳೆದರೆ, ಉಳಿಯುವ ಕೇವಲ ಶೇ. 0.5 ನಮ್ಮ ಬ್ಯಾಂಕುಗಳ ''ಭಾರೀ ಲಾಭ.''

ಈವರೆಗೆ ಲಾಭದಾಯಕವೆನಿಸಲ್ಪಟ್ಟ ಕಂಪನಿ ಕ್ಷೇತ್ರದ ಮುಂಗಡ ಕೂಡ ಈಗ ಕುಸಿಯುತ್ತಿದೆ. ಈ ಕಂಪನಿ ಕ್ಷೇತ್ರಕ್ಕೆ ಬ್ಯಾಂಕುಗಳಿಗಿಂತಲೂ ಕಡಿಮೆ

## ಬ್ಯಾಂಕಿಂಗ್ ತರಬೇತಿ ವ್ಯವಸ್ಥೆ : ಭವಿಷ್ಯದ ಸವಾಲುಗಳು

[5ನೇ ಪುಟದಿಂದ ಮುಂದುವರಿದುದು]

ದರಿಂದ ಮುಂಬರುವ ದಿನಗಳಲ್ಲಿ ಸಹಭಾಗೀ ವ್ಯವಸ್ಥಾಪನಕ್ಕೆ ಒತ್ತುಕೊಡಬೇಕಾಗಿದೆ. ಸಹಭಾಗೀ ವ್ಯವಸ್ಥಾಪನ, ತಂಡ ನಿರ್ಮಾಣ, ಗುಣಮಟ್ಟ ವಲಯ, ಗುಂಪು ಚಟುವಟಿಕೆ, ವೈಯಕ್ತಿಕ ಬೆಳವಣಿಗೆ ಮುಂತಾದ ಅಂಶಗಳನ್ನು ಗಮನದಲ್ಲಿರಿಸಿಕೊಂಡು ತರಬೇತಿಯನ್ನು ರೂಪಿಸುವುದು ಸಂಸ್ಥೆಯಲ್ಲಿ ಭಾಗೀದಾರಿ ಸಂಸ್ಕೃತಿ ಬೆಳೆಸುವುದಕ್ಕೆ ದಾರಿಮಾಡಿಕೊಡತ್ತದೆ.

### ಅಂತರರಾಷ್ಟ್ರೀಯ ಬ್ಯಾಂಕಿಂಗ್

ಅಂತರರಾಷ್ಟ್ರೀಯ ವ್ಯಾಪಾರ ಮತ್ತು ಹಣಕಾಸು ರಂಗದಲ್ಲಿ ಹೊಸಹೊಸ ಬಗೆಯ ವ್ಯಾಪಾರ ಶ್ರೇಣಿಗಳು ಬಳಕೆಗೆ ಬರುತ್ತಿವೆ. ಅತ್ಯಂತ ಕ್ಷಿಪ್ರ ಬದಲಾವಣೆಗೆ ಒಳಗಾಗುತ್ತಿವೆ. ಈ ಕ್ಷೇತ್ರದಲ್ಲೂ ನಿರಂತರವಾಗಿ ಜ್ಞಾನ, ಕೌಶಲ ವೃದ್ಧಿಸಿಕೊಳ್ಳುದುವು ಅವಶ್ಯಕವಾಗಿದೆ. ಹಾಗಾಗಿ ವಿಶೇಷ ತರಬೇತಿಯೂ ಬೇಕಾಗಿದೆ.

ಪರಿಮಾಣ ಹಾಗೂ ಸೇವಾ ವೈವಿಧ್ಯದ ದೃಷ್ಟಿಯಿಂದ ಅಗಾಧವಾದ ಬೆಳವಣಿಗೆ ಹೊಂದಿರುವ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ತರಬೇತಿಯ ಪರಿಕಲ್ಪನೆಯಲ್ಲಿ ಸಂರಚನಾತ್ಮಕ ಬದಲಾವಣೆಗಳಾಗುವುದು ಅನಿವಾರ್ಯವಾಗಿದೆ. ತರಬೇತಿಗೆ ಬೇಕಾದ ಮೂಲ ಸೌಕರ್ಯಗಳೂ ಹೆಚ್ಚಾಗಬೇಕಾಗಿದೆ. 28 ವಾಣಿಜ್ಯ ಬ್ಯಾಂಕುಗಳು ದೇಶದಾದ್ಯಂತ 244 ತರಬೇತಿ ಕೇಂದ್ರಗಳನ್ನು ಮಾತ್ರ ಹೊಂದಿದೆ. 1988ರಲ್ಲಿ ಒಟ್ಟು ಸಿಬ್ಬಂದಿಯ ಶೇ. 34.51ರಷ್ಟು ಜನರಿಗೆ ಮಾತ್ರ ತರಬೇತಿ ನೀಡಲು ಸಾಧ್ಯವಾಗಿದ್ದಿತು. ಹೊಸ ಸವಾಲುಗಳನ್ನು ಎದುರಿಸಿ, ತರಬೇತಿಯನ್ನು ನೀಡುವಲ್ಲಿ, ತರಬೇತಿಯ ಫಲವನ್ನು ದೊರಕಿಸುವಲ್ಲಿ ಬ್ಯಾಂಕಿಂಗಿನಲ್ಲಿಯ ತರಬೇತಿ ಯಶಸ್ವಿಯಾಗಬೇಕಾಗಿದೆ.

★

ಬಡ್ಡಿ ದರದಲ್ಲಿ ಬೇರೆಡೆ ಸಾಲ ಸೌಲಭ್ಯ ಸಿಗುತ್ತಿದೆ. ಏತನ್ಮಧ್ಯೆ ಕಂಪನಿ ಕ್ಷೇತ್ರ ತನ್ನದೇ ಆದ ವಟ್ಟದ ಮನೆ, ಭದ್ರತಾ ಕಪಾಟು ಮುಂತಾದ ಸೌಲಭ್ಯಗಳನ್ನು ಹೊಂದಲಾರಂಭಿಸುತ್ತಿದೆ. ಬಂಡವಾಳ ಮಾರುಕಟ್ಟೆಯ ಮೂಲಕ ತನ್ನದೇ ಆದ ನಿಧಿ ಸಂಚಯನ ಕೂಡ ಆರಂಭಿಸುತ್ತಿದೆ. ಬೇರೆಡೆಗಳಲ್ಲಿ ಕಂಪನಿ ಕ್ಷೇತ್ರಕ್ಕೆ ಕೇವಲ ಶೇ. 15ರ ಬಡ್ಡಿ ದರದಲ್ಲಿ ಸಾಲ ಸಿಗುತ್ತಿರುವಾಗ ಶೇ. 17 5ರ ಬಡ್ಡಿಯ ಬ್ಯಾಂಕ್ ಸಾಲ ಅದಕ್ಕೆ ಬೇಕಾಗಿಲ್ಲ. ಅಲ್ಲದೆ. ಬ್ಯಾಂಕುಗಳ ವಿವಿಧ ಅರ್ಜಿ ನಮೂನೆಗಳನ್ನು ಭರ್ತಿ ಮಾಡುವುದರಿಂದ ಹಿಡಿದು, ದಾಸ್ತಾನು ವಿವರಗಳ ಸಲ್ಲಿಕೆಯ ವರೆಗೆ ಅನೇಕ ರೀತಿಯ ಕಟ್ಟುಪಾಡುಗಳನ್ನು ಅನುಸರಿಸುವ ತಾಪತ್ರಯ ಬೇಡವಾಗಿದೆ. ಹೀಗಾಗಿ, ಉಳಿದ ಶೇ. 10ರ ನಿಧಿಯ ವಿಚಾರದಲ್ಲಿ ಕೂಡ, ಕಂಪನಿ ಕ್ಷೇತ್ರದ ಬೇಡಿಕೆಯ ಕೊರತೆಯಿಂದ, ಬ್ಯಾಂಕುಗಳು ತಮ್ಮ ಲಾಭ-ಪ್ರದತೆಗೆ ಘಾಸಿ ಮಾಡಿಕೊಂಡಿವೆ ಎನ್ನಬೇಕಾಗುತ್ತದೆ.

ಇತ್ತೀಚೆಗೆ ನಗದು ವ್ಯವಸ್ಥಾಪನ ಕೂಡ ದೊಡ್ಡ ಸಮಸ್ಯೆಯಾಗಿ ಬೆಳೆಯುತ್ತಿದೆ. ಮೀಸಲು ಹಣದ ಅನುಪಾತದ ಮೊದಲ ಶೇ. 3ಕ್ಕೆ ರಿಸರ್ವ್ ಬ್ಯಾಂಕ್ ಹೇಗೂ ಬಡ್ಡಿ ಕೊಡುವುದಿಲ್ಲ. 1934ರ ರಿಸರ್ವ್ ಬ್ಯಾಂಕ್ ಅಧಿನಿಯಮದ ಪ್ರಕಾರ ಈ ನಿಯಮ ಜಾರಿಗೊಂಡಿದ್ದು, ಇನ್ನೂ ಅದೇ ತತ್ವವನ್ನು ಅನುಸರಿಸಲಾಗುತ್ತಿದೆ. ಆದರೆ, 1934ರಲ್ಲಿದ್ದ ದೇಶದ ಆರ್ಥಿಕ ಪರಿಸ್ಥಿತಿ ಹಾಗೂ ಬ್ಯಾಂಕಿಂಗ್ ವ್ಯವಸ್ಥೆಯನ್ನು 1989ರ ಸ್ಥಿತಿಯೊಂದಿಗೆ ಹೋಲಿಸಿದರೆ, ಈ ಕ್ರಮ ಸೂಕ್ತವಲ್ಲವೆಂದು ಭಾವಿಸಬಹುದಾಗಿದೆ. ಏಕೆಂದರೆ 1934ರಲ್ಲಿ ಬ್ಯಾಂಕುಗಳ ಒಟ್ಟು ಠೇವಣಿಯಲ್ಲಿ ಶೇ. 50ಕ್ಕೂ ಹೆಚ್ಚು ಮೊಬಲಗು ಚಾಲ್ತಿ ಠೇವಣಿಯಾಗಿತ್ತು. ಈಗ ಅದು ಕೇವಲ ಶೇ. 14ಕ್ಕೆ ಇಳಿದಿದೆ. ಆಗಿನ ಸ್ಥಿರ ಠೇವಣಿ ಪ್ರಮಾಣ ಕೇವಲ ಶೇ. 27 ಆಗಿತ್ತು. ಈಗ ಅದು ಶೇ. 55ಕ್ಕೆ ಏರಿದೆ. ಇದರಲ್ಲೂ 5 ವರ್ಷಗಳಿಗಿಂತ ಹೆಚ್ಚು ಕಾಲಾವಧಿಯ ಸ್ಥಿರ ಠೇವಣಿ, ಬ್ಯಾಂಕುಗಳ ಇಂದಿನ ಠೇವಣಿಯ ಶೇ. 62ರಷ್ಟಕ್ಕಿಂತಲೂ ಅಧಿಕವಾಗಿದೆ. ಇದರಿಂದ ಕೊಡಬೇಕಾದ ಬಡ್ಡಿಯ ಹೊರೆ ಅಧಿಕವಾಗಿದೆ. ಬ್ಯಾಂಕುಗಳ ಲಾಭಪ್ರದತೆಗೆ ಇಲ್ಲಿ ದಯನೀಯ ಹೊಡೆತ ಬಿದ್ದಿದೆ. ಬಡ್ಡಿ ಕೊಡದೇ ಇರುವ ಚಾಲ್ತಿ ಠೇವಣಿಯ ಪ್ರಮಾಣದ ಕುಸಿತ ಒಂದೆಡೆಯಾದರೆ, ಬಡ್ಡಿ ಕೊಡಬೇಕಾದ ನಿಶ್ಚಿತ ಠೇವಣಿಯ ಪ್ರಮಾಣದ, ವ್ಯಯ ಮೂಲಗಳ ಏರಿಕೆ ಇನ್ನೊಂದೆಡೆ –ಹೀಗೆ ಬ್ಯಾಂಕುಗಳ ಎರಡೂ ಕೆನ್ನೆಗೂ ಬಲವಾದ ಏಟು ಬಿದ್ದಿದೆಯೆನ್ನುವುದು ಸತ್ಯ ಈಗ ಈ ನೋವಿನಿಂದ ಚೇತರಿಸಿಕೊಳ್ಳುವ ಉಪಾಯದತ್ತ ಮಾತ್ರ ಗಮನ ಹರಿಸುವುದು ಒಳಿತು.

ಎಲ್ಲೆಡೆ ಕೇಳಿಬರುತ್ತಿರುವಂತೆ, ಗ್ರಾಹಕ ಸೇವೆ ಹದಗೆಟ್ಟಿರುವುದಕ್ಕೆ ಹೆಚ್ಚುತ್ತಿರುವ ಸರ್ಕಾರಿ ವ್ಯವಹಾರ ಕೂಡ ಕಾರಣ. ಇದರಿಂದ ಲಭಿಸುವ ಸರ್ಕಾರಿ ಕಮಿಷನ್, ಬ್ಯಾಂಕುಗಳ ಕಾರ್ಯ ಬಾಹುಳ್ಯಕ್ಕೆ ಹೋಲಿಸಿದರೆ, ತುಂಬಾ ಕಿಂಚಿತ್ತು. ಇದಕ್ಕೊಂದು ಪರ್ಯಾಯ ಕ್ರಮ ಯೋಚಿಸಬೇಕು. ಇಲ್ಲವೇ ಸರ್ಕಾರಿ ಕಮಿಷನ್ ದರವನ್ನು ಹೆಚ್ಚಿಸಲೇಬೇಕು.

ಮುಂಗಡಗಳ ಮರುಪಾವತಿಗೆ ಕಾನೂನಿನ ಆಧಾರದಲ್ಲಿ ಮೂರು ವರ್ಷಗಳ ಕಾಲ ಮಿತಿಯನ್ನು ನಿರ್ಣಯಿಸಲಾಗಿರುವುದು ಕೂಡ ಬ್ಯಾಂಕುಗಳಿಗೆ ಒಂದು ರೀತಿಯಿಂದ ತೊಂದರೆ ಕೊಟ್ಟ ಹಾಗೆಯೇ. 1969ರಲ್ಲಿ 13 ಲಕ್ಷ ಮುಂಗಡ ಖಾತೆಗಳಿದ್ದವು. ಈ ಇಪ್ಪತ್ತು ವರ್ಷಗಳಲ್ಲಿ ಅವುಗಳ ಸಂಖ್ಯೆ 3 ಕೋಟಿಗೆ ಏರಿದೆ. ಜಾಮೀನುಗಳ ನವೀಕರಣ, ದಾಖಲೆ ದಸ್ತಾವೇಜುಗಳ ನವೀಕರಣ, ಶಿಲ್ಕುಗಳ ದೃಢೀಕರಣ ಇತ್ಯಾದಿಗಳು ಸಂಕೀರ್ಣಗೊಳ್ಳುತ್ತಿರುವುದರಿಂದ ಈ ಕಾಲಪರಿಮಿತಿಯನ್ನು ಮೂರರಿಂದ ಐದು ವರ್ಷಗಳಿಗೆ ಏರಿಸುವುದು ಸೂಕ್ತ.

ದೀರ್ಘಾವಧಿ ಠೇವಣಿಗಳಿಗೆ ಹೆಚ್ಚು ಬಡ್ಡಿ ಕೊಡುವ ಬ್ಯಾಂಕುಗಳು ಅದೇ ದೀರ್ಘಾವಧಿಯ ಸಾಲಗಳಿಗೆ ಕಡಿಮೆ ಬಡ್ಡಿ ಹೇರಬೇಕೆಂದರೆ ಹೇಗೆ ಸರಿ ? ನಿಶ್ಚಿತ ಠೇವಣಿಗಳ ಮೇಲೆ ಪಡೆಯುವ ತಗಾದೆ ಸಾಲಗಳಿಗೆ ಠೇವಣಿಯ ಬಡ್ಡಿ ದರಕ್ಕಿಂತ ಶೇ. 2 ಹೆಚ್ಚು ಬಡ್ಡಿ ವಿಧಿಸಲಾಗುತ್ತಿದ್ದರೂ ಇದರಿಂದ ಲಾಭವಿಲ್ಲ. ಶೇ. 10ರ ಬಡ್ಡಿಯ ಸ್ಥಿರ ಠೇವಣಿಯ ಮೇಲೆ ಪಡೆಯುವ ತಗಾದೆ ಸಾಲಕ್ಕೆ ಶೇ. 12 ವಿಧಿಸಲಾಗುತ್ತಿತ್ತು. ಅದೇ ಮೊತ್ತವನ್ನು ಬೇರೆ ಕಡೆಗಳಿಂದ ಪಡೆಯುವಾಗ ಅದೇ ಗ್ರಾಹಕ ಶೇ. 17.5 ಬಡ್ಡಿ ನೀಡಲು ಸಿದ್ಧನಿರುತ್ತಾನೆ. ಈ ಬಡ್ಡಿ ದರಕ್ಕೆ ಹೋಲಿಸಿದರೆ ತಗಾದೆ ಸಾಲದ ಬಡ್ಡಿ ದರ ಗ್ರಾಹಕನಿಗೆ ತುಂಬ ಲಾಭದಾಯಕ. ಹಾಗೆಯೇ ಬ್ಯಾಂಕಿಗೆ ಅಷ್ಟೇ ನಷ್ಟಕಾರಕ. ಹಾಗಿರುವಾಗ ಈ ತಗಾದೆ ಸಾಲದ ಬಡ್ಡಿ ದರವನ್ನು ಕನಿಷ್ಠ ಶೇ. 14ಕ್ಕಾದರೂ ಏಕೆ ಏರಿಸಬಾರದು ?

ವಿದೇಶಿ ಕರೆನ್ಸಿ ಹಾಗೂ ಅನಿವಾಸಿ ಬಾಹ್ಯ ಖಾತೆಗಳ ಮೇಲಿನ ಬಡ್ಡಿ ದರ ಹೆಚ್ಚಾಗಿದೆ. ವಿದೇಶಿ ವಿನಿಮಯದ ಆವಶ್ಯಕತೆ ಹಾಗೂ ಪ್ರಾಮುಖ್ಯದಿಂದಾಗಿ ಅಂತಹ ಖಾತೆಗಳನ್ನು ಆಕರ್ಷಿಸಲು ಹೆಚ್ಚು ಬಡ್ಡಿ ದರ ನಿಗದಿಗೊಳಿಸಿದ್ದು ಸೂಕ್ತವೇ ಆದರೂ, ಇದರಿಂದ ಬ್ಯಾಂಕುಗಳ ಮೇಲೆ ಮಾತ್ರ ಹೆಚ್ಚಿನ ಹೊರೆ ಬೀಳುತ್ತಿರುವುದು ಎಷ್ಟು ಸಮಂಜಸ ? ರಫ್ತು ವ್ಯಾಪಾರದ ಮುಂಗಡಗಳಿಗೆ ಕಡಿಮೆ ಬಡ್ಡಿ ದರ ವಿಧಿಸುವುದರಿಂದ ಬ್ಯಾಂಕುಗಳಿಗೆ ಉಂಟಾಗುವ ಹೆಚ್ಚಿನ ಹೊರೆ ಸರಿದೂಗಿಸಲು ಸಬ್ಸಿಡಿ ಸೌಲಭ್ಯ ಒದಗಿಸಿದಂತೆಯೇ ಈ ಅನಿವಾಸಿ ಖಾತೆಗಳ ಠೇವಣಿ ಸಂಗ್ರಹಕ್ಕೂ ಸ್ವಲ್ಪಮಟ್ಟಿನ ಸಮಾನ ಸೌಲಭ್ಯವನ್ನೇಕೆ ರಿಸರ್ವ್ ಬ್ಯಾಂಕ್ ಕೊಡಬಾರದು ? ರಫ್ತು ವ್ಯವಹಾರ ದೇಶದ ಗಳಿಕೆಗೆ ಪೂರಕವೆಂದೂ ಅನಿವಾಸಿ ಠೇವಣಿಗಳು ದೇಶದ ಹೊಣೆಗಳೆಂದೂ ಸರ್ವವಿದಿತವಾಗಿದ್ದರೂ, ಈ ಅನಿವಾಸಿ ಠೇವಣಿ ಸಂಗ್ರಹದ ''ಪೂರ್ಣ ಭಾರ'' ಬ್ಯಾಂಕುಗಳ ಹೆಗಲ ಮೇಲೆ ಮಾತ್ರ ಏಕೆ ಎಂಬುದು ಇಲ್ಲಿಯ ಪ್ರಶ್ನೆ. ಬ್ಯಾಂಕುಗಳು ಅಂತಹ ಠೇವಣಿ ಸಂಗ್ರಹಣೆಯ ಅಭಿಯಾನ ಕೈಗೊಳ್ಳಲು ಪೂರಕವಾಗುವಂತೆ, ಸಬ್ಸಿಡಿಯಂತಹ ಸೌಲಭ್ಯವೊಂದನ್ನು ಜಾರಿಗೆ ತರುವ ಅಗತ್ಯವಿದೆ.

ಠೇವಣಿ ವಿಮೆ ಹಾಗೂ ಉದರಿ ಖಾತರಿ ನಿಗಮಕ್ಕೆ ಇಂದು ಬ್ಯಾಂಕುಗಳು ಸಲ್ಲಿಸುವ ಶುಲ್ಕ ಗಣನೀಯವಾಗಿ ಏರುತ್ತಿದೆ. ಬ್ಯಾಂಕುಗಳು ಸುಸ್ತಿ ಸಾಲಗಳ ಬಾಬ್ತು ಹಿಂದಿರುಗಿ ಪಡೆಯುವ ಹಣಕ್ಕಿಂತಲೂ ಈ ಖಾತರಿ ಶುಲ್ಕ ಹೆಚ್ಚಾಗಿದೆ ಎಂದರೆ ಆಶ್ಚರ್ಯಪಡಬೇಕಾಗಿಲ್ಲ. ಸರ್ಕಾರದ ನಿರ್ದೇಶದಂತೆ ಬ್ಯಾಂಕುಗಳು ನೀಡುವ ಆದ್ಯತಾ ರಂಗದ ಸಾಲಗಳ ಮೇಲೂ ಖಾತರಿ ಶುಲ್ಕ ಸಲ್ಲಿಸುವ ಕ್ರಮ ಅರ್ಥಹೀನವಲ್ಲವೆ ? ನಗದು ಮೀಸಲು ಹಾಗೂ ಪರಿನಿಯತ ದ್ರವತ್ವ ಅನುಪಾತದ ರೂಪದಲ್ಲಿರುವ ಶೇ. 53ರಷ್ಟು ಠೇವಣಿಗಳ ಮೇಲೂ ವಿಮೆ ಮಾಡಿಸುವ ಪರಿಕ್ರಮ ನಗೆಪಾಟಲಿನ ವಿಚಾರ. ಈ ನಡುವೆ ಠೇವಣಿ ವಿಮೆ ಉದರಿ ಖಾತರಿ ನಿಗಮಕ್ಕೆ ಸಲ್ಲಿಸಬೇಕಾದ ವಿವರಗಳು, ಭರ್ತಿ ಮಾಡಬೇಕಾದ ವಿವಿಧ ನಮೂನೆಗಳು ಮುಂತಾಗಿ ಬ್ಯಾಂಕ್‌ಗಳ ಮೇಲೆ ಭೀಮಗಾತ್ರದ ಹೊರೆ ಬಿದ್ದಿದೆ ಎಂದೇ ಅನ್ನಬೇಕು. ಈ ಬಗ್ಗೆ ಇನ್ನೊಮ್ಮೆ ಯೋಚಿಸುವ, ಹೊಸ ನಿರ್ಧಾರ ಕೈಗೊಳ್ಳುವ ಅಗತ್ಯವಿದೆ.

ಮೀಸಲು ಹಣದ ಮೇಲಿನ ಸರಾಸರಿ ಬಡ್ಡಿ ದರವನ್ನು ಶೇ. 10.5ಕ್ಕಿಂತ ಸ್ವಲ್ಪವಾದರೂ ಏರಿಸುವುದು ಸ್ವಾಗತಾರ್ಹ. ಬ್ಯಾಂಕುಗಳು ಎದುರಿಸುವ ಸರಾಸರಿ ನಿಧಿ ನಿರ್ವಹಣೆ ವೆಚ್ಚ ಹಾಗೂ ಸೇವಾ ವೆಚ್ಚಗಳಿಗೆ ಸರಿದೂಗುವಷ್ಟಾದರೂ, ನಿಧಿಯ ಮೇಲೆ ಪ್ರತಿಫಲ ಇರಬೇಕು. ಪ್ರತಿ ಬಾರಿಯೂ ಮೀಸಲು ಅನುಪಾತ ನಿರ್ಧರಿಸುವಾಗ, ಹಿಂದಿನ ಆರು ತಿಂಗಳ ಅವಧಿಯಲ್ಲಿ ಬ್ಯಾಂಕುಗಳು ಎದುರಿಸಿದ ನಿಧಿ ನಿರ್ವಹಣೆಯ ವೆಚ್ಚವನ್ನು ಆಧಾರವಾಗಿಟ್ಟುಕೊಂಡು. ಮುಂದಿನ ಅವಧಿಗೆ ಅನುಪಾತವನ್ನು ನಿಗದಿಪಡಿಸುವ ಕ್ರಮ ತುಂಬ ತರ್ಕಬದ್ಧವೂ ವೈಜ್ಞಾನಿಕವೂ ಆಗಿರುತ್ತದೆ.

1949ರ ಬ್ಯಾಂಕಿಂಗ್ ನಿಯಂತ್ರಣ ಅಧಿನಿಯಮದ 24ನೆಯ ಅನುಬಂಧದ ಪ್ರಕಾರ, ಪರಿನಿಯತ ದ್ರವತ್ವ ಅನುಪಾತದ ಹಿಂದಿನ ದೃಷ್ಟಿಕೋನ, ಬ್ಯಾಂಕುಗಳ ದುರ್ದಿನಗಳಲ್ಲಿ ಅವುಗಳಿಗೆ ನೆರವಾಗುವಂತೆ, ನಿಧಿಸಂಚಯನ ಮಾಡುವುದೇ ಆಗಿತ್ತು. ದೇಶದ ಆರ್ಥಿಕ ನಿಯಂತ್ರಣದ ಒಂದು ಅಸ್ತ್ರವಾಗಿಯೂ ಇದು ಮುಂದಿನ ದಿನಗಳಲ್ಲಿ ಬೆಳೆಯಿತು. ಆದರೆ ಈಗ ಇದು ಕೇವಲ ಸರ್ಕಾರದ ಹಾಗೂ ದೊಡ್ಡ ಹಣಕಾಸು ಸಂಸ್ಥೆಗಳಿಗೆ ಹಣವನ್ನೊದಗಿಸುವ ಒಂದು ಪರಿಕ್ರಮವಾಗಿ ಪರಿವರ್ತಿತವಾಗಿರುವುದು ದುರ್ದೈವದ ಸಂಗತಿ. ಇದರ ಜೊತೆಗೆ ಪರಿನಿಯತ ದ್ರವತ್ವ ಅನುಪಾತ ನಿರ್ವಹಣೆಯ ದೈನಂದಿನ ಸುಸ್ತಿಗೆ ಶೇ. 4 ದಂಡಶುಲ್ಕ ಬೇರೆ ಸಲ್ಲಿಸಬೇಕಾಗಿದೆ. ಇದು ಸುಮಾರು ರೂ. 2,500 ಕೋಟಿ ಎಂದು ಅಂದಾಜು ಮಾಡಲಾಗಿದ್ದು, ಈ ಹಣವನ್ನು ಸರ್ಕಾರಿ ಪ್ರತಿಭೂತಿಗಳಲ್ಲಿ ತೊಡಗಿಸಿ

ಕೇವಲ ಶೇ.10ರಂತೆ ರೂ.250 ಕೋಟಿ ಪ್ರತಿಫಲ ಪಡೆಯಲಾಗುತ್ತದೆ. ಆದರೆ ಇದೇ ಹಣವನ್ನು ಶೇ. 14ರ ಸರಾಸರಿ ನೀಡಿಕೆ ದರದಲ್ಲಿ ತೊಡಗಿಸಿದರೆ, ರೂ.350 ಕೋಟಿ ಪ್ರತಿಫಲ ಸಾಧ್ಯವಿದೆ. ಹೀಗೆ ರೂ. 100 ಕೋಟಿಯಷ್ಟು ಬ್ಯಾಂಕಿಂಗ್ ವಲಯಕ್ಕೆ ಈ ಅನುಪಾತದಿಂದಲೇ ನಷ್ಟವಾಗುತ್ತಿದೆ ಎಂದರೆ, ಹೃದಯಾಘಾತವಾಗಬಲ್ಲ ಸುದ್ದಿಯೇ; ಅಷ್ಟೇ ಅಲ್ಲ, ಸರ್ಕಾರದ ಕಿಸೆಯಲ್ಲಿ ಅಷ್ಟೊಂದು ಧನ ಸಂಗ್ರಹವಾಗುವುದೂ ಹಣ ದುಬ್ಬರದ ಸ್ಥಿತಿಯ ಭೀತಿಗೆ ಕಾರಣ. ಈ ಎರಡೂ ಸಮಸ್ಯೆಗಳನ್ನು ಬಗೆಹರಿಸುವ ನಿಟ್ಟಿನಲ್ಲಿ ಒಂದು ಮಧ್ಯಸ್ಥಿಕೆಯ ಯೋಜನೆಯ ಅಗತ್ಯವಿದೆ. ಈ ದಿಸೆಯಲ್ಲಿ ಬ್ಯಾಂಕುಗಳು ಶೇ. 15 ದರದ ಡಿಬೆಂಚರ್ ರೂಪದಲ್ಲಿ ಹಣವನ್ನು ತೊಡಗಿಸುವ ಹೊಸ ಕ್ರಮವೊಂದನ್ನು ಆಚರಣೆಗೆ ತರುವುದು ಸೂಕ್ತ.

ಒಟ್ಟಿನಲ್ಲಿ ನಗದು ಮೀಸಲು ಹಾಗೂ ಪರಿನಿಯತ ದ್ರವತ್ವ ಅನುಪಾತಗಳಲ್ಲಿ ಉಂಟಾಗುವ ಸುಸ್ತಿಯನ್ನು ಸಮವಾಗಿರಿಸಿ, ಬ್ಯಾಂಕುಗಳಿಂದ ದಂಡ ರೂಪದಲ್ಲಿ ಕೋಟಿಗಟ್ಟಲೆ ಹಣವನ್ನು ದೋಚುವುದೇ ರಿಸರ್ವ್ ಬ್ಯಾಂಕಿನ ಮುಖ್ಯೋದ್ದೇಶವಾಗಕೂಡದು. ಬದಲಾಗಿ, ಬ್ಯಾಂಕುಗಳ ಬೆನ್ನು ತಟ್ಟಿ ಪ್ರೋತ್ಸಾಹಿಸುವ ಕೆಲಸವನ್ನು ರಿಸರ್ವ್ ಬ್ಯಾಂಕ್ ಮಾಡಬೇಕಾಗಿದೆ. ವಣಿಕ ಬ್ಯಾಂಕಿಂಗ್, ಬಂಡವಾಳ ಹೂಡಿಕೆ ಪೋಷಣೆ, ತೆರಿಗೆ ಯೋಜನೆ, ಗುತ್ತಿಗೆ ವ್ಯವಹಾರ, ವಿದೇಶೀ ಶಾಖಾ ವಿಸ್ತರಣೆ ಇತ್ಯಾದಿ ಲಾಭದಾಯಕ ಕ್ಷೇತ್ರಗಳತ್ತ ಬ್ಯಾಂಕಿಂಗ್ ಕಾರ್ಯ ವಿಸ್ತಾರಗೊಳ್ಳಬೇಕು. ರೈಲ್ವೆ, ಅಂಚೆ, ಸಾರಿಗೆ ಸಂಪರ್ಕಗಳ ಸೇವಾ ಶುಲ್ಕಕ್ಕೆ ಹೋಲಿಸಿದರೆ, ಬ್ಯಾಂಕಿಂಗ್ ಸೇವಾ ಶುಲ್ಕ ಅಷ್ಟೊಂದು ದುಬಾರಿಯಾಗಿಲ್ಲ. ಇಲ್ಲಿ ಒಂದು ನಿಷ್ಠುರವಾದ ಮಾತು ಹೇಳಬೇಕಾಗುತ್ತದೆ. 1985ರ ಜುಲೈ 1ರಿಂದ ರಿಸರ್ವ್ ಬ್ಯಾಂಕಿನ ಆದೇಶದಂತೆ ಜಾರಿಗೆ ಬಂದ ಸಾರ್ವಜನಿಕ ರಂಗದ ಬ್ಯಾಂಕುಗಳ ಸೇವಾ ಶುಲ್ಕ ನಿಜಕ್ಕೂ ಅವೈಜ್ಞಾನಿಕ. ಇದರ ದುರ್ಲಾಭ ಪಡೆಯಲು ಗ್ರಾಹಕ ವರ್ಗ ಯತ್ನಿಸುತ್ತಿದೆ. ಉದಾ: ರೂ. 5,400ರ ಡ್ರಾಫ್ಟ್ ಪಡೆಯಬೇಕಾದರೆ, ಗ್ರಾಹಕ ರೂ. 20 ಸೇವಾ ಶುಲ್ಕ ತರಬೇಕಾಗುತ್ತದೆ. ಇದರ ಬದಲು ರೂ. 5,000 ಹಾಗೂ ರೂ. 400ರ ಎರಡು ಡ್ರಾಫ್ಟ್‌ಗಳನ್ನು ಅವನು ಕೊಂಡುಕೊಂಡರೆ, ತರಬೇಕಾದ ಸೇವಾ ಶುಲ್ಕ ರೂ. 10 ಮತ್ತು ರೂ. 2ರಂತೆ, ಕೇವಲ ರೂ. 12. ಹೀಗೆ ಗ್ರಾಹಕ ರೂ. 8 ಉಳಿಸಬಹುದು. ಇದರಿಂದ ಬ್ಯಾಂಕುಗಳಿಗೆ ರೂ. 8 ನಷ್ಟ ಮಾತ್ರವಲ್ಲದೆ ಎರಡೆರಡು ಡ್ರಾಫ್ಟ್‌ಗಳನ್ನು ಬರೆಯಲು ಅರ್ಜಿ ನಮೂನೆ, ಡ್ರಾಫ್ಟ್ ಮುದ್ರಣ, ಬರೆಯಲು ತಗಲುವ ವೆಚ್ಚ, ಎರಡೆರಡು ಬಾರಿ ಶಾಖೆಗಳಿಗೆ ತಿಳಿವಳಿಕೆ ಪತ್ರದ ರವಾನೆ—ಹೀಗೆ ಇಮ್ಮಡಿ ಕೆಲಸದ ಹೊರೆ ಬೇರೆ. ಆದ್ದರಿಂದ ಹಂತ ಪದ್ಧತಿಯಿಲ್ಲದೆ, ವೈಜ್ಞಾನಿಕವಾಗಿ ಸೇವಾ ಶುಲ್ಕದ ಪರಿಷ್ಕರಣದ ತುರ್ತು ಅಗತ್ಯವಿದೆ.

ನಮ್ಮ ದುರವಸ್ಥೆಗೆ ಬೇರೆಯವರು ಮಾತ್ರ ಕಾರಣವೆಂದು ನಾವು ಭಾವಿಸುವುದು ಸರಿಯಲ್ಲ. ಅದರಲ್ಲಿ ನಮ್ಮ ಪಾಲು ಎಷ್ಟು ಎಂಬುದನ್ನೂ ಅದನ್ನು ನಿವಾರಿಸುವ ದಾರಿಗಳನ್ನೂ ನಾವು ಹುಡುಕಬೇಕು. ಮುಖ್ಯತಃ ಬ್ಯಾಂಕುಗಳಿಗೆ ತಾವು ಲಾಭ ಗಳಿಸಬೇಕೆಂಬ ಹಂಬಲ ಹಾಗೂ ಅದನ್ನು ಉಳಿಸಬೇಕೆಂಬ ಮನೋಭಾವ ಮೂಡಿಬರಬೇಕು. ಬ್ಯಾಂಕ್ ನೌಕರರಲ್ಲಿ ಈ ಲಾಭಪ್ರಜ್ಞೆ ಚಿಗುರೊಡೆಯಬೇಕು. ಬ್ಯಾಂಕುಗಳ ಒಟ್ಟು ವೆಚ್ಚಗಳ ನಾಲ್ಕನೆಯ ಒಂದಂಶದಷ್ಟಿರುವ ಸಿಬ್ಬಂದಿ ವೆಚ್ಚವನ್ನು ಉತ್ತಮ ಮೇಲ್ವಿಚಾರಣೆಯಿಂದ ಕಡಿಮೆ ಮಾಡಿಕೊಂಡು, ಆದಷ್ಟು ಅನಗತ್ಯ ಖರ್ಚಿನ ಬಾಬ್ತುಗಳನ್ನು ಹಾಗೂ ಸೋರುವಿಕೆಯನ್ನು ತಡೆಹಿಡಿಯುವ ಕಡೆ ಗಮನಹರಿಸಬೇಕು. ಅನಗತ್ಯ ನಗದು ಶೇಖರಣೆಯ ನಿವಾರಣೆ, ದಕ್ಷ ನಿಧಿ ವ್ಯವಸ್ಥಾಪನ ಯೋಜನೆ, ಕೈಗಾರಿಕಾ ಹಾಗೂ ರಾಷ್ಟ್ರೀಯ ಕೃಷಿ ಬ್ಯಾಂಕುಗಳಿಂದ ಗರಿಷ್ಠ ಪುನರ್ಧನಾರ್ಜನೆ, ಸೂಕ್ತ ಉದರಿ–ಠೇವಣಿ ಅನುಪಾತ ವರ್ಧನೆ ಇತ್ಯಾದಿಗಳನ್ನೊಳಗೊಂಡ ಉತ್ತಮ ಲಾಭಯೋಜನೆ ನಮ್ಮ ಬ್ಯಾಂಕುಗಳಿಗೆ ಅಗತ್ಯವಾಗಿದೆ. ಸಿಬ್ಬಂದಿಯವರಿಗೆ ಉತ್ತಮ ಸವಲತ್ತು ನೀಡಿ, ಅವರಲ್ಲಿ ಸಂಸ್ಥೆಯ ಬಗೆಗಿನ ಅಭಿಮಾನ ಹೆಚ್ಚುವಂತೆ ಮಾಡುವ ಮೂಲಕ ಅವರಿಂದ ಸಮರ್ಪಣ ಮನೋಭಾವದ ಸೇವೆಯನ್ನು ಪಡೆಯಬಹುದೆಂಬುದನ್ನು ಆಡಳಿತ ವರಿಷ್ಠರು ಅರ್ಥಮಾಡಿಕೊಳ್ಳಬೇಕು. ಒಟ್ಟಿನಲ್ಲಿ ಬರೀ ಅಂಕಿಅಂಶಗಳಿಂದ ವ್ಯಕ್ತವಾಗುವ ಲಾಭದ ದುಂಡಂಕಿಯನ್ನು ನಂಬಿ ಭ್ರಮನಿರಸನಗೊಳ್ಳುವ ಮೊದಲೇ ಬ್ಯಾಂಕುಗಳು ಎಚ್ಚೆತ್ತು, ಕ್ರಿಯಾಶೀಲವಾಗಬೇಕಾದ ಗಳಿಗೆ ಬಂದಿದೆ ಎಂದೆನ್ನಬಹುದು. ★

---

# ಯಕ್ಷ ಗಹಗಹಿಸಿದ್ದ

**'ಚಂದಿರ'**

ಒಣಮರದ ಬುಡಕೊರಗಿ ಧರ್ಮಜನಿಗೆ ಜೊಂಪು
ಇನ್ನೆಷ್ಟು ದಿನ ನನ್ನ ಪ್ರಜೆಗಳಿಗೆ ವನವಾಸ
ಪ್ರತಿ ಗುಡಿಸಲಿಗು ಬೆಳಕು ಪ್ರತಿ ಕೈಗೆ ಕೆಲಸ
ಯಾವಾಗ ಪಶುಪಶುಗೆ ನೀರು–ಗ್ರಾಸ?

ತೆರೆಮರೆಯ ಯಕ್ಷನ ಸವಾಲು:
"ಪ್ರಶ್ನೆಗಳಿಗುತ್ತರಿಸು ನೀರು ಕುಡಿಯುವ ಮೊದಲು!"
ತುಂಬು ಕೊಳ, ತಿಳಿಯ ಜಲ.
ನಕುಲ ಸಹದೇವರಿಗೆಂಥ ಸೋಲು!
ಧರ್ಮಜನಿಗೆ ಜೊಂಪು...ಕನಸು..
ಗಾಂಡೀವಿಯೂ ಬಂದ, ಅದೆ ಯಕ್ಷ, ಅದೆ ವಾದ,
ಲಕ್ಷ್ಯಗೊಡಲಿಲ್ಲ—ಪ್ರಶ್ನೆ ಏನೆನ್ನಲಿಲ್ಲ
ಬಿಲ್ಲ ಠೇಂಕರಿಸಿ ದುಡುಕಿ ಕುಸಿದ.
ಯಕ್ಷ ಗಹಗಹಿಸಿದ್ದ ನೇಪಥ್ಯದಲ್ಲಿ

ಈಗ ಬಂದವ ಭೀಮ ಮೂಗಿನಡಿ ಹುರಿಮೀಸೆ,
ಬಲಭುಜವ ಶೋಭಿಸುವ ಉಕ್ಕು ಗದೆ,
ಎಲ್ಲ ಸಾಧಿಪೆನೆಂಬ ಉಬ್ಬಿದೆದೆ.
ಎದೆ ತಟ್ಟಿ ಗದೆ ತೂಗಿ
ಮದ್ದಾನೆಯಂತೆ ಕೊಳದತ್ತ ನುಗ್ಗಿದ್ದಾನೆ ಭೀಮ.
ಯಕ್ಷ ಗಹಗಹಿಸಿದ್ದಾನೆ ನೇಪಥ್ಯದಲ್ಲಿ.

ಅತ್ತ ಧರ್ಮಜನ ಜೊಂಪು ಕನಸಿನಲ್ಲಿ
ಪ್ರಜೆಗಳ ಗುಂಪು ಹಾಹಾಕಾರ ನೀರಿಗಾಗಿ.
ನೀರ ತಂದೇ ತೀರುತ್ತಾನೆ ಭೀಮ ನಿಮಗಾಗಿ.
ಜಯ ಭೀಮ ಭೀಮ ಜಯ ಜನಗಣದ ನಮನ.
ವಾಸ್ತವಕೆ ಬಿಜಯಗೈಯಲಿ ಸ್ವಾಮೀ, ತಮ್ಮ ಗಮನ.
ಇದು ಗ್ರಾಮಗಳನ್ನುದ್ಧಾರ ಮಾಡುವ ಸೇವಾಕ್ಷೇತ್ರ ಅಭಿಗಮನ!

"ಸರ್ವೀಸ್ ಏರಿಯಾ ಅಪ್ರೋಚು,"
"ಸರ್ವೀಸ್ ಏರಿಯಾ ಅಪ್ರೋಚು."
ಗೆಲುವಿನುತ್ಕಟ ಕಿರುಚು.

ಸರಕಾರದೆಲ್ಲ ನೀತಿಯೂ ಸ್ವಸ್ಥ
ಧರ್ಮಜನ ಜೊಂಪು ಕನಸಿನಲ್ಲಿ.
ಹಳ್ಳಿಹಳ್ಳಿಯೂ ಪುಟ್ಟ ಇಂದ್ರಪ್ರಸ್ಥ!

ದಡದಲುರುಳಿ ಮೂರ್ಛೆ ಹೊಂದಿದ್ದಾನೆ
ಸಹಕಾರಿ ಸಹದೇವ
ಆಗ ಅರ್ಭಟಿಸಿದರೂ ಈಗ ಅಂತಃಸತ್ವ ಉಡುಗಿ
ಕುಸಿದಿದ್ದಾನೆ ಆರಾರ್‌ಬಿ ಅರ್ಜುನ
ಎಲ್ಲರಿಗೂ ಗೊತ್ತು:
ಈ ಭೀಮನೂ ಬೀಳುತ್ತಾನೆ ಸತ್ತು.

ಎಂದು ರೂಪುಗೊಂಡೀತೊಂದು ನೈಜ ಅಭಿಗಮನ?
ದೊರೆತೀತೆ ಯಕ್ಷನಿಗೆ ಹೆಚ್ಚು ಗಮನ?
ನೋಡೋಣ—ಉತ್ತರಿಸಬಂದಾನೇನೊ ಧರ್ಮನಂದನ.

# ಆದ್ಯತಾವಲಯದ ಹಾಗೂ ದುರ್ಬಲ ವರ್ಗಗಳ ಅಭಿವೃದ್ಧಿಯಲ್ಲಿ ಪಟ್ಟಣ ಸಹಕಾರಿ ಬ್ಯಾಂಕುಗಳ ಪಾತ್ರ

**ಇಂದು ಆದ್ಯತಾವಲಯದ ಹಾಗೂ ದುರ್ಬಲ ವರ್ಗಗಳ ಸಮಗ್ರ ಅಭಿವೃದ್ಧಿಗೆ ಬೇಕಾದ ಒಟ್ಟು ಸಾಲವನ್ನು ಸರ್ಕಾರಿ ಹಾಗೂ ಸರ್ಕಾರದ ಒಡೆತನದ ಬ್ಯಾಂಕುಗಳು ಮಾತ್ರ ಪೂರೈಸುವುದು ಸಾಧ್ಯವಿಲ್ಲ. ಖಾಸಗಿ ಮತ್ತು ಸಹಕಾರಿ ಬ್ಯಾಂಕುಗಳೂ ಹೆಗಲುಕೊಟ್ಟು ನಿಲ್ಲುವುದು ಅವಶ್ಯ.**

ಮಲ್ಲಿಕಾರ್ಜುನ ವಗ್ಗನವರ
ಪ್ರಾಧ್ಯಾಪಕರು, ಸಹಕಾರ ತರಬೇತಿ
ಮಹಾ ವಿದ್ಯಾಲಯ, ಬೆಂಗಳೂರು

ಮುಂಬರುವ ವರ್ಷಗಳಲ್ಲಿ ಸರಕಾರಗಳು ಎದುರಿಸಬೇಕಾದ ಪ್ರಮುಖ ಸಮಸ್ಯೆಗಳಲ್ಲಿ ರಾಷ್ಟ್ರಾಭಿವೃದ್ಧಿಯ ಯೋಜನೆಗಳನ್ನು ಸಂಪೂರ್ಣವಾಗಿ ಹಾಗೂ ಸಮಗ್ರವಾಗಿ ಕಾರ್ಯಗತಗೊಳಿಸಲು ಬೇಕಾದ ಅಪರಿಮಿತವಾದ ಹಣಕಾಸಿನ ಸಂಪನ್ಮೂಲಗಳನ್ನು ರೂಢಿಸಿಕೊಳ್ಳುವದಾಗಿದೆಎನ್ನಬಹುದು. ಗ್ರಾಮೀಣ ಪ್ರದೇಶಗಳ ಸಮಗ್ರ ಅಭಿವೃದ್ಧಿಗಾಗಿ ಸರಕಾರಗಳು ಸಮರ ಸಾರಿದ್ದರೆ, ನಗರಗಳಲ್ಲಿ ಔದ್ಯೋಗಿಕ ಕ್ರಾಂತಿಯ ಕಹಳೆ ಊದಲು ಕಂಕಣಬದ್ಧವಾಗಿವೆ. ದೇಶ ರಾಜಕೀಯ ಸ್ವಾತಂತ್ರ್ಯ ಗಳಿಸಿದ ದೀರ್ಘ ಕಾಲವಾದ ಮೇಲಾದರೂ ಲಕ್ಷಗಟ್ಟಲೆ ಜನರಿಗೆ ಉದ್ಯೋಗ ಒದಗಿಸಬಲ್ಲ ಆದ್ಯತಾ ವಲಯಗಳನ್ನು ಗುರುತಿಸಿ ಅವುಗಳ ಅಭಿವೃದ್ಧಿಗಾಗಿಯೂ ಆರ್ಥಿಕ ಮತ್ತು ಸಾಮಾಜಿಕವಾಗಿ ಹಿಂದುಳಿದ ದುರ್ಬಲ ವರ್ಗದ ಜನಾಂಗಗಳ ಮತ್ತು ಬುಡಕಟ್ಟಿನವರ ಪ್ರಗತಿಗಾಗಿಯೂ ಅನೇಕ ರೀತಿಯ ಯೋಜನೆಗಳನ್ನು ಹಮ್ಮಿಕೊಂಡಿರುವುದು ಮೆಚ್ಚಬೇಕಾದದ್ದೆ. ಆದ್ಯತಾ ವಲಯಗಳ ಹಾಗೂ ದುರ್ಬಲ ವರ್ಗಗಳ ಅಭಿವೃದ್ಧಿಯನ್ನು ತ್ವರಿತವಾಗಿ ಸಾಧಿಸಲು ಹಾಕಿದ ಯೋಜನೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ತರಲು ಬೇಕಾದ ಹಣವನ್ನು ಸಂಪೂರ್ಣವಾಗಿಕೇವಲ ಸರ್ಕಾರವೇಒದಗಿಸಲಾರದು. ಅದರಂತೆ ಜನರ ಮೇಲೆ ವಿವಿಧ ರೂಪದಲ್ಲಿ ಸುಂಕ ಹೇರಿ ಅಥವಾ ವಿದೇಶಗಳಿಂದ ಸಾಲ ಎತ್ತಿ ಸರ್ಕಾರ ಹಣ ಹೂಡುವುದು ಸಮಂಜಸವಾಗಲಾರದು. ಆದರೆ ಹಣಕಾಸಿನ ಭಂಡಾರಗಳಾದ ಬ್ಯಾಂಕುಗಳು ಅಭಿವೃದ್ಧಿಸಾಧಕ ಯೋಜನೆಗಳಲ್ಲಿ ತಮ್ಮ ಹೆಚ್ಚಿನ ಹಣವನ್ನು ಹೂಡುವಂತೆ ಅವನ್ನು ಪ್ರೋತ್ಸಾಹಿಸುವುದು ಹಾಗೂ ಒತ್ತಾಯಿಸುವುದು ಅವಶ್ಯವಾಗಿದೆ. ಈ ಉದ್ದೇಶದಿಂದಲೇ ವಾಣಿಜ್ಯ ಬ್ಯಾಂಕುಗಳು ರಾಷ್ಟ್ರೀಕರಣಗೊಂಡುವು. ಇಂದು ಆಧುನಿಕ ಬ್ಯಾಂಕುಗಳು ತಮ್ಮ ಸಾಂಪ್ರದಾಯಿಕ ಸಾಲದ ನೀತಿ ತತ್ತ್ವಗಳಲ್ಲಿ ದೇಶದ ಅಭಿವೃದ್ಧಿಯ ವಿಷಯವನ್ನು ಸೇರಿಸಬೇಕು. ಆದ್ದರಿಂದ ಸಾರ್ವಜನಿಕ ಕ್ಷೇತ್ರದ, ಖಾಸಗಿ ಕ್ಷೇತ್ರದ, ಅರೆ-ಸರ್ಕಾರಿ ಕ್ಷೇತ್ರದ ಮತ್ತು ಸಹಕಾರಿ ಕ್ಷೇತ್ರದ ಸಮಸ್ತ ಬ್ಯಾಂಕುಗಳ ಸಾಲದ ನೀತಿ ಸರ್ಕಾರ ಕೈಗೊಳ್ಳುವ ಅಭಿವೃದ್ಧಿ ಯೋಜನೆಗಳಿಗೆ ಪೂರಕವಾಗುವಂತಿರಬೇಕು. ಇಂದು ಆದ್ಯತಾ ವಲಯದ ಹಾಗೂ ದುರ್ಬಲ ವರ್ಗಗಳ ಸಮಗ್ರ ಅಭಿವೃದ್ಧಿಗೆ ಬೇಕಾದ ಒಟ್ಟು ಸಾಲದ ಬೇಡಿಕೆಯನ್ನು ಕೇವಲ ಸರ್ಕಾರ ಅಥವಾ ಸರ್ಕಾರದ ಒಡೆತನವಿದ್ದ ಬ್ಯಾಂಕುಗಳು ಮಾತ್ರ ಪೂರೈಸಲು ಸಾಧ್ಯವಿಲ್ಲ. ಸರ್ಕಾರದ ಸಂಪೂರ್ಣ ಒಡೆತನದ ಹಾಗೂ ಅರೆ-ಸರ್ಕಾರಿ ಒಡೆತನದ ಬ್ಯಾಂಕುಗಳೊಡನೆ ಖಾಸಗಿ ಕ್ಷೇತ್ರದ ಬ್ಯಾಂಕುಗಳು ಹಾಗೂ ಸಹಕಾರಿ ಕ್ಷೇತ್ರದ ಬ್ಯಾಂಕುಗಳು ಸಹ ಹೆಗಲು ಕೊಟ್ಟು ನಿಲ್ಲುವುದು ಅವಶ್ಯವಾಗಿದೆ.

ಇಂದು ಭಾರತದ ಬ್ಯಾಂಕಿಂಗ್ ರಚನಾ ವ್ಯವಸ್ಥೆ ಸಾರ್ವಜನಿಕ ಕ್ಷೇತ್ರದ ರಾಷ್ಟ್ರೀಕೃತ 28 ಬ್ಯಾಂಕುಗಳನ್ನು, ಖಾಸಗಿ ಕ್ಷೇತ್ರದ 176 ಅನುಸೂಚಿತ ಬ್ಯಾಂಕುಗಳನ್ನು, ಅರೆ-ಸರ್ಕಾರಿ ಒಡೆತನದ ಸುಮಾರು 200 ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಹಾಗೂ 1,825 ಸಹಕಾರಿ ಕ್ಷೇತ್ರದ ಬ್ಯಾಂಕುಗಳನ್ನು—ಅಂದರೆ ಒಟ್ಟು 2229 ಬ್ಯಾಂಕುಗಳನ್ನು—ಹೊಂದಿದೆ. ಇಡೀ ಪ್ರಪಂಚದಲ್ಲಿಯೇ ಇದು ಅತಿ ಹೆಚ್ಚು ಬ್ಯಾಂಕುಗಳನ್ನು ಹೊಂದಿದ ರಾಷ್ಟ್ರವೆನ್ನಬಹುದು. ಸಹಕಾರಿ ಬ್ಯಾಂಕುಗಳು ಆದ್ಯತಾವಲಯಗಳಾದ ಕೃಷಿ, ಕೈಗಾರಿಕೆ, ಗ್ರಾಮೀಣ ಉದ್ದಿಮೆ ಮುಂತಾದವುಗಳ ಅಭಿವೃದ್ಧಿಗಾಗಿ ಹಾಗೂ ಜನಸಾಮಾನ್ಯರ ಆರ್ಥಿಕ ಸಾಮಾಜಿಕ ಪ್ರಗತಿಗಾಗಿ ಜನ್ಮ ತಳೆದು ಅನೇಕ ವರ್ಷಗಳಿಂದಲೂ ಸೇವೆ ಸಲ್ಲಿಸುತ್ತ ಬಂದಿದ್ದರೂ ಇತ್ತೀಚಿನ ವರ್ಷಗಳಲ್ಲಿ ಇವು ಇನ್ನೂ ಹೆಚ್ಚಿನ ಮಟ್ಟದಲ್ಲಿ ಈ ಕ್ಷೇತ್ರಗಳ ಅಭಿವೃದ್ಧಿಗಾಗಿ ಸಾಲ ಹಾಗೂ ಮುಂಗಡಗಳನ್ನು ಹಂಚಲು ಸರ್ಕಾರ ಹಾಗೂ ಭಾರತೀಯ ರಿಸರ್ವ್ ಬ್ಯಾಂಕು ಹೆಚ್ಚಿನ ನೈತಿಕ ಜವಾಬ್ದಾರಿಯನ್ನು ಇವುಗಳ ಮೇಲೆ ವಹಿಸಿದೆ.

## ಪಟ್ಟಣ ಸಹಕಾರಿ ಬ್ಯಾಂಕುಗಳು

ಭಾರತದ ಬ್ಯಾಂಕಿಂಗ್ ಭೂಪಟದಲ್ಲಿ ಗಾತ್ರದಲ್ಲಿರದಿದ್ದರೂ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುವ ಬ್ಯಾಂಕುಗಳೆಂದರೆ ಸಹಕಾರಿ ಬ್ಯಾಂಕುಗಳು. 1988ರಲ್ಲಿ ರಾಷ್ಟ್ರದಲ್ಲಿ ಒಟ್ಟು 29 ರಾಜ್ಯ ಸಹಕಾರಿ ಬ್ಯಾಂಕುಗಳು 351 ಜಿಲ್ಲಾ ಸಹಕಾರಿ ಮಧ್ಯವರ್ತಿ ಬ್ಯಾಂಕುಗಳು ಹಾಗೂ 1,445 ಪಟ್ಟಣ ಸಹಕಾರಿ ಬ್ಯಾಂಕುಗಳು ಇದ್ದುವು. ಸಹಕಾರಿ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಅತಿ ಹೆಚ್ಚು ಯಶಸ್ವಿಯಾಗಿ ಬೆಳೆದು ಬರುತ್ತಿರುವ ಬ್ಯಾಂಕುಗಳೆಂದರೆ ಪಟ್ಟಣ ಸಹಕಾರಿ ಬ್ಯಾಂಕುಗಳು. 1988ರಲ್ಲಿ ಮಹಾರಾಷ್ಟ್ರದ 8 ಹಾಗೂ ಗುಜರಾತದ 3 ಬ್ಯಾಂಕುಗಳಿಗೆ ಭಾರತದ ರಿಸರ್ವ್ ಬ್ಯಾಂಕು ಶೆಡ್ಯೂಲ್ಡ್ ಬ್ಯಾಂಕಿನ ಸ್ಥಾನಮಾನ ಕೊಟ್ಟಿರುವುದು ಈ ಬ್ಯಾಂಕುಗಳ ಪ್ರಗತಿಯನ್ನು ಪ್ರತಿಬಿಂಬಿಸುತ್ತದೆ. ಪಟ್ಟಣ ಬ್ಯಾಂಕುಗಳು ಸರ್ಕಾರದಿಂದ ಷೇರು ಬಂಡವಾಳ ಅಥವಾ ಯಾವುದೇ ಹಣಕಾಸಿನ ಸಹಾಯಕ್ಕೆ ಕೈ ಒಡ್ಡದೇ ಸ್ವಾವಲಂಬಿ ಸಂಸ್ಥೆಗಳಾಗಿವೆ. ಸುಸ್ತಿ ಸಾಲದ ಬಾಧೆಯಿಂದ ಬಳಲದೆ ಬಲವಾಗಿ ಬೆಳೆದು ಬರುತ್ತಿವೆ. ಕೈಗಾರಿಕೆ–ಕಸುಬುಗಾರಿಕೆಗಳ ಬೆಳವಣಿಗೆಯಲ್ಲಿ ಇವು ಅತಿ ಮಹತ್ವದ ಪಾತ್ರವಹಿಸಿವೆ. ಸರ್ಕಾರ ಇತರ ಬ್ಯಾಂಕುಗಳ ಅಭಿವೃದ್ಧಿಗಾಗಿ ಬೇಸಾಯ, ಮಾರಾಟ, ಗ್ರಾಹಕ ಮುಂತಾದ ವಿವಿಧ ಕ್ಷೇತ್ರೀಯ ಸಹಕಾರಿ ಸಂಘಗಳ ಬೆಳವಣಿಗೆಗಾಗಿ ಮೊದಲಿನಿಂದಲೂ—ಅದರಲ್ಲಿಯೂ ಹಿಂದಿನ ಎಲ್ಲಾ ಪಂಚವಾರ್ಷಿಕ ಯೋಜನಾವಧಿಯಲ್ಲಿ –ಮಹತ್ವವನ್ನು ಈ ಬ್ಯಾಂಕುಗಳ ಅಭಿವೃದ್ಧಿಗಾಗಿ ಇಲ್ಲಿಯವರೆಗೆ ಕೊಡದಿದ್ದರೂ, ಬ್ಯಾಂಕುಗಳ ಬ್ಯಾಂಕಾದ ಭಾರತದ

ರಿಸರ್ವ್ ಬ್ಯಾಂಕು ಈ ಬ್ಯಾಂಕುಗಳ ಪ್ರಗತಿಗಾಗಿ ಮಲತಾಯಿ ಧೋರಣೆಯನ್ನು ಮೊದಲಿನಿಂದಲೂ ತಳೆಯುತ್ತ ಬಂದಿದ್ದರೂ ಇವು ಇಂದು ರಾಷ್ಟ್ರೀಕೃತ ಬ್ಯಾಂಕುಗಳಿಗೇ ಸವಾಲಾಗುವಂತೆ—ಅದರಲ್ಲಿಯೂ ಮಹಾರಾಷ್ಟ್ರ, ಗುಜರಾತ್, ಕರ್ನಾಟಕ, ತಮಿಳು ನಾಡಿನಲ್ಲಿ ಹೆಚ್ಚು ಯಶಸ್ವಿಯಾಗಿ—ಬೆಳೆದು ಬರುತ್ತಿವೆ. ಇವುಗಳ ಪ್ರಗತಿಯನ್ನು ಕೆಳಗಿನ ಕೋಷ್ಟಕದಲ್ಲಿ ನೋಡಬಹುದು.

## ಪಟ್ಟಣ ಸಹಕಾರಿ ಬ್ಯಾಂಕುಗಳ ಪ್ರಗತಿ* (ಕೋಟಿ ರೂ. ಗಳಲ್ಲಿ)

| ಸಂಖ್ಯೆ | ವಿವರ | 1976–77 | | 1986 87 | | | | |
|---|---|---|---|---|---|---|---|---|
| | | ಭಾರತ | ಕರ್ನಾಟಕ | ಭಾರತ | ಕರ್ನಾಟಕ | ಮಹಾರಾಷ್ಟ್ರ | ಗುಜರಾತ್ | ತಮಿಳುನಾಡು |
| 1 | ಬ್ಯಾಂಕುಗಳ ಸಂಖ್ಯೆ | 1165 | 177 | 1345 | 210 | 376 | 297 | 135 |
| 2 | ಷೇರು ಬಂಡವಾಳ | 74 | 6 | 273 | 25 | 138 | 48 | 18 |
| 3 | ಕಾಯ್ದಿಟ್ಟ ನಿಧಿ | 50 | 6 | 346 | 37 | 177 | 96 | 13 |
| 4 | ಠೇವಣಿ | 533 | 42 | 4319 | 317 | 2550 | 844 | 200 |
| 5 | ದುಡಿಯುವ ಬಂಡವಾಳ | 761 | 62 | 5841 | 387 | 3150 | 1344 | 295 |
| 6 | ಹಂಚಿದ ಸಾಲ | 405 | 43 | 5207 | 255 | 3500 | 896 | 278 |
| 7 | ಬರಬೇಕಾದ ಸಾಲ | 356 | 32 | 3520 | 162 | 1850 | 863 | 288 |
| 8 | ಸುಸ್ತಿ ಸಾಲ | 39 | 5 | 335 | 18 | 170 | 54 | 41 |
| 9 | ಸುಸ್ತಿ ಸಾಲದ ಪ್ರಮಾಣ | | | 10% | 11% | 9% | 6% | 14% |

* ಆಧಾರ: ಭಾರತದ ರಿಸರ್ವ್ ಬ್ಯಾಂಕಿನ ಅಂಕಿ ಸಂಖ್ಯೆಗಳ ವಿವರದ ತಃಖ್ತೆ

* ಸಹಕಾರಿ ಪತ್ತಿನ ಸಂಘಗಳ ಬಗ್ಗೆ, 1976–77

* ಅಖಿಲ ಭಾರತ ಸಹಕುರಿ ಕಾಂಗ್ರೆರ್ ಅಧಿವೇಶನಕ್ಕಾಗಿ ಭಾರತದ ಸಹಕಾರಿ ಯೂನಿಯನ್ ತಯಾರಿಸಿದ ಹಿನ್ನೆಲೆ ಪತ್ರ

### ಪಟ್ಟಣ ಬ್ಯಾಂಕುಗಳ ಸಾಲಹಂಚುವಿಕೆಯಲ್ಲಿ ವೈವಿಧ್ಯ

''ಎಲ್ಲ ಮೊಟ್ಟೆಗಳನ್ನೂ ಒಂದೇ ಬುಟ್ಟಿಯಲ್ಲಿ ಇಡುವುದು ಸರಿಯಲ್ಲ'' ಎಂಬ ಗಾದೆ ಮಾತು ಎಲ್ಲ ಬ್ಯಾಂಕುಗಳಿಗೂ ಅನ್ವಯಿಸುತ್ತದೆ. ವಾಣಿಜ್ಯ ಬ್ಯಾಂಕುಗಳಂತೆ ಪಟ್ಟಣ ಸಹಕಾರಿ ಬ್ಯಾಂಕುಗಳೂ ತಮ್ಮ ಸಾಲದ ನೀತಿಯಲ್ಲಿ ವಿವಿಧತೆಯನ್ನಿಂದು ಅನುಸರಿಸುತ್ತಲಿವೆ. ಅನೇಕ ಪಟ್ಟಣ ಬ್ಯಾಂಕುಗಳು ಹಲವಾರು ಜಾತಿಗಳ ಅಥವಾ ಉದ್ದಿಮೆಗಳ ಆಧಾರದ ಮೇಲೆ ಜನ್ಮತಳೆದಿದ್ದರೂ, ತಮ್ಮ ತಮ್ಮ ಜನಾಂಗದವರಿಗೆ ಅಥವಾ ಉದ್ದಿಮೆದಾರರಿಗೆ ಸಾಲ ಹಂಚುತ್ತ ಬಂದಿದ್ದರೂ ಈಗ ಇವು ತಮ್ಮ ಸಾಲದ ನೀತಿಯಲ್ಲಿ ಬಹುಮಟ್ಟಿಗೆ ಬದಲಾವಣೆ ಮಾಡಿಕೊಂಡಿವೆ. ಈ ಬ್ಯಾಂಕುಗಳು ಸಾಧ್ಯವಿದ್ದಷ್ಟು ಅನೇಕ ರೀತಿಯ ಉದ್ದಿಮೆಗಳಿಗೆ ವಿವಿಧ ವೃತ್ತಿಗಳಲ್ಲಿ ತೊಡಗಿದ ಜನರಿಗೆ, ಅನೇಕ ಆಧಾರಗಳ ಮೇಲೆ. ಅನೇಕ ಉದ್ದಿಮೆಗಳಿಗಾಗಿ ಹಾಗೂ ತಮ್ಮ ಕಾರ್ಯಕ್ಷೇತ್ರದ ವಿವಿಧ ಭಾಗಗಳಲ್ಲಿ ಸಾಲ ಹಂಚುವದು ಅನೇಕ ರೀತಿಯಲ್ಲಿ ಅವಶ್ಯವಾಗಿದೆ. ಅಲ್ಲದೇ ಈ ಸಾಲದಲ್ಲಿ ವಿವಿಧತೆ ಅವುಗಳ ಭದ್ರತೆಯ ದೃಷ್ಟಿಯಿಂದಲೂ ಸೂಕ್ತವಾಗಿದೆ. ಈ ಬ್ಯಾಂಕುಗಳ ಸಾಲದ ಮಹತ್ವದ ತತ್ವಗಳಾದ ಆಧಾರ, ಆಧಾರಗಳ ಹಣಕಾಸಿನ ಶೀಘ್ರ ದ್ರವೀಕರಣತೆ, ಸಾಲದ ಜವಾಬ್ದಾರಿಗಳ ಬದಲೀಕರಣ, ಲಾಭ ಮುಂತಾದುವುಗಳ ಜೊತೆಗೆ ರಾಷ್ಟ್ರೀಯ ಅಭಿವೃದ್ಧಿಯನ್ನು ಅನುಲಕ್ಷಿಸಬೇಕು. ಇಂದು ಯಾವುದೇ ಬ್ಯಾಂಕಿನ ಸಾಲ ಹಂಚುವ ನೀತಿ ಸರ್ಕಾರ ಹಮ್ಮಿಕೊಳ್ಳುವ ರಾಷ್ಟ್ರಾಭಿವೃದ್ಧಿ ಯೋಜನೆಗಳಿಗೆ ಅನುಗುಣವಾಗಿರಬೇಕು. ಭಾರತದ ರಿಸರ್ವ್ ಬ್ಯಾಂಕು ಸಹಕಾರಿ ಬ್ಯಾಂಕುಗಳಿಗೆ ಸಂಬಂಧಪಟ್ಟ ಬ್ಯಾಂಕಿಂಗ್ ನಿಯಂತ್ರಣ ಕಾನೂನಿನ ಪ್ರಕರಣ 21ರ ಮೇರೆಗೆ ಈ ಸಹಕಾರಿ ಬ್ಯಾಂಕುಗಳು ಹೊಂದುವ ಠೇವಣಿಯ ಮೇಲಿನ ಬಡ್ಡಿ ದರ. ಸಾಲದ ಮೇಲಿನ ಬಡ್ಡಿ ದರ ಮುಂತಾದುವುಗಳ ಬಗ್ಗೆ ಆದೇಶಗಳು ಮತ್ತು ಸುತ್ತೋಲೆಗಳ ಮೂಲಕ ನಿಯಂತ್ರಿಸುವ ಅಧಿಕಾರ ಹೊಂದಿದೆ. ಈ ಬ್ಯಾಂಕುಗಳು ಸಾಲ ಹಂಚುವ ವಿವಿಧ ಜನಸಾಮಾನ್ಯರ ಆರ್ಥಿಕ ಪ್ರಗತಿಗೆ ಅನುಕೂಲವಾಗಬಲ್ಲ ವಲಯಗಳಿಗೆ ಸಂಬಂಧಪಟ್ಟಿರಬೇಕು. ಆದ್ದರಿಂದ ಸರ್ಕಾರ ಇಂದು ದೇಶದ ಸಂಪೂರ್ಣ ಅಭಿವೃದ್ಧಿ ಸಾಧಿಸಬೇಕಾದರೆ ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ಹಿಂದುಳಿದ ದುರ್ಬಲ ವರ್ಗಗಳ ಪ್ರಗತಿಯಾಗದೆ ಮತ್ತು ಇವರ ಆರ್ಥಿಕ ಪ್ರಗತಿ ಸಾಧಿಸಲು ಪೂರಕವಾಗಬಲ್ಲ ಆದ್ಯತಾ ವಲಯಗಳ ಪ್ರಗತಿ ಸಾಧಿಸದೆ ದೇಶದ ಸಂಪೂರ್ಣ ಅಭಿವೃದ್ಧಿ ಅಸಾಧ್ಯವೆಂದು ಪರಿಗಣಿಸಿ ಈ ಬ್ಯಾಂಕುಗಳು ಈ ವಲಯಗಳಿಗೆ ಅಧಿಕ ಸಾಲ ಹಂಚಬೇಕೆಂದು ಒತ್ತಾಯಿಸುತ್ತಲಿವೆ.

ಪಟ್ಟಣ ಬ್ಯಾಂಕುಗಳ ವಿಚಾರವಾಗಿ ರಿಸರ್ವ್ ಬ್ಯಾಂಕು ಕೆ. ಮಾಧವದಾಸರ ನೇತೃತ್ವದಲ್ಲಿ ನೇಮಿಸಿದ್ದ ಪಟ್ಟಣ ಸಹಕಾರಿ ಬ್ಯಾಂಕುಗಳ ಸಮಿತಿ ಪಟ್ಟಣ ಬ್ಯಾಂಕುಗಳಿಗಾಗಿ ಕೆಳಗಿನವುಗಳನ್ನು ಮೊಟ್ಟ ಮೊದಲು ಆದ್ಯತಾ ವಲಯಗಳೆಂದು ಶಿಪಾರಸ್ಸು ಮಾಡಿವೆ :

1 ಸಣ್ಣ ಹಾಗೂ ಗುಡಿ ಕೈಗಾರಿಕೆ,
2 ಸುಶಿಕ್ಷಿತ ನಿರುದ್ಯೋಗಿಗಳಿಗೆ ಲಾಭದಾಯಕ ಉದ್ಯೋಗ ಕಲ್ಪಿಸಬಲ್ಲ ಯೋಜನೆಗಳು,
3 ಸ್ವಂತ ಉದ್ಯೋಗ ಹೊಂದಿದವರಿಗೆ ಮತ್ತು ವೃತ್ತಿಪರರಿಗೆ ಕೊಡುವ ಸಾಲ,
4 ಸಣ್ಣ ಸಾರಿಗೆದಾರರು ಮತ್ತು ನೀರು ಸರಬರಾಜುದಾರರಿಗೆ ಸಾರಿಗೆ ವಾಹನ ಕೈಕೊಳ್ಳಲು ಕೊಡುವ ಸಾಲ,
5 ವ್ಯಾಪಾರ ಹಾಗೂ ವಾಣಿಜ್ಯಗಳಿಗೆ ಕೊಡುವ ಸಾಲ,
6 ಗೃಹನಿರ್ಮಾಣ ಕಾರ್ಯಗಳಿಗೆ ಕೊಡುವ ಸಾಲ,
7 ಬಳಕೆ ಸಾಲ
8 ಗ್ರಾಹಕರ ಸಹಕಾರಿ ಸಂಘಗಳಿಗೆ ಸಾಲ.

## ಸಣ್ಣ ಹಾಗೂ ಗೃಹ ಕೈಗಾರಿಕೆಗಳಿಗೆ ಸಾಲ ಸೌಲಭ್ಯ

ಈ ಬ್ಯಾಂಕುಗಳು ಆದ್ಯತೆಯ ಮೇರೆಗೆ ಹಂಚಬೇಕಾದ ವಲಯಗಳಲ್ಲಿ ಅತಿ ಮಹತ್ವವಾದದ್ದು ಕೈಗಾರಿಕೆ, ಕಸಬುದಾರಿಕೆ. ಕಾರಣ, ಕಡಿಮೆ ಬಂಡವಾಳದಿಂದ ಸ್ಥಳೀಯವಾಗಿ ದೊರೆಯಬಲ್ಲ ಕಚ್ಚಾ ಸಾಮುಗ್ರಿ ಮತ್ತು ತಾಂತ್ರಿಕತೆಯಿಂದ ಈ ಉದ್ದಿಮೆಗಳನ್ನು ಪ್ರಾರಂಭಿಸಬಹುದು. ಅಲ್ಲದೆ ಈ ಸಣ್ಣ ಕೈಗಾರಿಕೆ, ಕಸಬುದಾರಿಕೆಗಳು ಉದ್ಯೋಗಾವಕಾಶವನ್ನು ಹೆಚ್ಚು ಹೆಚ್ಚಿನ ಪ್ರಮಾಣದಲ್ಲಿ ಒದಗಿಸಿ ನಿರುದ್ಯೋಗ ಸಮಸ್ಯೆಯನ್ನು ತಡೆಗಟ್ಟಲು ಸಹಾಯ ಮಾಡುತ್ತವೆ. ಆದ್ದರಿಂದಲೇ ಸರ್ಕಾರ ರಾಷ್ಟ್ರಾದ್ಯಂತ ಕೈಗಾರಿಕೆಗಳನ್ನು ಸ್ಥಾಪಿಸಲು ಆದ್ಯತೆ ನೀಡಿದೆ.

1967ರ ಡವ್ಲೆ ಸಮಿತಿಯ ಶಿಫಾರಸ್ಸಿನ ಮೇರೆಗೆ ಭಾರತದ ರಿಸರ್ವ್ ಬ್ಯಾಂಕು ತನ್ನ ವ್ಯವಸಾಯ ದೀರ್ಘಾವಧಿ ಸಾಲದ ನಿಧಿಯಿಂದ ಕೈಗಾರಿಕೆ ಸಾಲ ಹಂಚುವ ಪಟ್ಟಣ ಬ್ಯಾಂಕುಗಳಿಗೆ ಅವುಗಳ ಸಾಲ ತರುವ ಪ್ರಮಾಣ ಹೆಚ್ಚಿಸಲು ಶೇರು ಬಂಡವಾಳವನ್ನು ರಾಜ್ಯ ಸರ್ಕಾರದ ಮೂಲಕ ಒದಗಿಸುತ್ತದೆ. ಆದರೆ ಈ ನಿಧಿ ಈಗ್ಗೆ ರಿಸರ್ವ್ ಬ್ಯಾಂಕಿನಿಂದ ನಬಾರ್ಡ್‌ಗೆ ವರ್ಗಾಯಿಸಲ್ಪಟ್ಟಿರುವುದರಿಂದ ಈಗ ಈ ಬ್ಯಾಂಕುಗಳಿಗೆ ಈ ಶೇರು ಬಂಡವಾಳದ ಸಾಲದ ಸಹಾಯ ನಿಂತಿದ್ದರೂ ಇದನ್ನು ನಬಾರ್ಡ್ ಮೂಲಕ ಮುಂದುವರಿಸಬಹುದು. 1967ರ "ಸಹಕಾರಿ ಬ್ಯಾಂಕುಗಳ ಮೂಲಕ ಔದ್ಯೋಗಿಕ ಸಾಲ ಹಂಚುವ ಕಾರ್ಯಕಾರಿ ಸಮಿತಿ"ಯ ಶಿಫಾರಸ್ಸಿನ ಮೇರೆಗೆ ರಿಸರ್ವ್ ಬ್ಯಾಂಕ್ ಅಧಿನಿಯಮದ ಪ್ರಕರಣ 17(2)(ಬಿಬಿ) ಅಥವಾ (4) (ಸಿ) ಅನ್ವಯ 22ರ ಗುಂಪಿನಲ್ಲಿ ಬರುವ ಸಣ್ಣ ಕೈಗಾರಿಕೆಗಳಿಗೆ ಈ ಬ್ಯಾಂಕುಗಳು ಒದಗಿಸಿಕೊಡುವ ಉತ್ಪತ್ತಿ ಹಾಗೂ ದುಡಿಯುವ ಬಂಡವಾಳಕ್ಕೆ ಕೊಟ್ಟ ಸಾಲಕ್ಕೆ ಪುನರ್ಧನ ಸಾಲವನ್ನು ಶೇಕಡಾ 2½ಯಷ್ಟು ಕಡಿಮೆ ಬಡ್ಡಿ ದರದಲ್ಲಿ 1969–70ರಿಂದ ರಿಸರ್ವ್ ಬ್ಯಾಂಕು ಒದಗಿಸುತ್ತಲಿದೆ. ಶೇಕಡ 11ರಿಂದ 11½ ಬಡ್ಡಿ ದರವನ್ನು ಮೀರದಂತೆ ತಲಾ ರೂ. 2 ಲಕ್ಷದ ವರೆಗೆ ಸಾಲದ ಮಿತಿಯುಳ್ಳ ಸಣ್ಣ ಕೈಗಾರಿಕೆಗಳಿಗೆ ರಾಜ್ಯ ಸರ್ಕಾರದ ಭರವಸೆಯ ಮೇರೆಗೆ 'ಎ' ಮತ್ತು 'ಬಿ' ಲೆಕ್ಕ ಪರಿಶೋಧನ ವರ್ಗೀಕರಣವುಳ್ಳ ಹಾಗೂ ಸಕಾಲದಲ್ಲಿ ಪರಿನಿಯತ ಲೆಕ್ಕಪತ್ರಗಳನ್ನು ನೀಡುವ ಸಾಲಗಾರರಿಗೆ ರಿಸರ್ವ್ ಬ್ಯಾಂಕು ಪುನರ್ಧನ ಸಾಲವನ್ನು ಒದಗಿಸುತ್ತದೆ. ಈ ಬ್ಯಾಂಕುಗಳು ಈ ಉದ್ಯಮಿಗಳಿಗಾಗಿ ಕೊಡುವ ಸಾಲದ ಮರುಪಾವತಿಗೆ ಠೇವಣಿ ವಿಮಾ ಮತ್ತು ಸಾಲಮರುಪಾವತಿ ಭರವಸೆ ನಿಗಮ ಭರವಸೆ ನೀಡುತ್ತವೆ.

ಆದರಂತೆ ಭಾರತದ ಕೈಗಾರಿಕಾಭಿವೃದ್ಧಿ ಬ್ಯಾಂಕು 'ಎ' ಮತ್ತು 'ಬಿ' ಲೆಕ್ಕಪರಿಶೋಧನ ವರ್ಗೀಕರಣವುಳ್ಳಹಾಗೂ ಠೇವಣಿ ವಿಮಾ ಹಾಗೂ ಸಾಲ ಮರುಪಾವತಿ ಭರವಸೆ ನಿಗಮ'ದಿಂದ ಮಾನ್ಯತೆ ಪಡೆದ ಪಟ್ಟಣ ಬ್ಯಾಂಕುಗಳ ಸಣ್ಣ ಕೈಗಾರಿಕೆಗಳ ಉತ್ಪತ್ತಿ ಮತ್ತು ದುಡಿಯುವ ಬಂಡವಾಳಕ್ಕಾಗಿ ರಾಜ್ಯ ಸಹಕಾರಿ ಬ್ಯಾಂಕುಗಳ ಮೂಲಕ ಒದಗಿಸುತ್ತದೆ. ಇವುಗಳಿಂದ ಈ ಮುಂದಿನ ಕಲಾಪಗಳಿಗಾಗಿ ನೆರವು ದೊರಕುತ್ತದೆ.

1 ಪದಾರ್ಥಗಳ ಉತ್ಪಾದನೆ, ಸಂಸ್ಕರಣ ಮತ್ತು ಸಂಗ್ರಹಣೆ,
2 ಹಡಗು ಸಾಗಾಣಿಕೆ,
3 ಗಣಿ ಕೈಗಾರಿಕೆ,
4 ಹೊಟೆಲ್ ಉದ್ದಿಮೆ,
5 ಸರಕು ಸಾಗಣೆ ಅಥವಾ ವಾಹನ ಸೌಲಭ್ಯ ಒದಗಿಸುವುದು,
6 ಯಂತ್ರಗಳ ರಿಪೇರಿ ಕಾರ್ಯಾಗಾರ ಇತ್ಯಾದಿ ಉದ್ದಿಮೆಗಳು,
7 ವಿದ್ಯುಚ್ಛಕ್ತಿ ಉತ್ಪಾದನೆ,
8 ಸಂಶೋಧನ ಕೈಗಾರಿಕೆಗಳು, ಅಭಿವೃದ್ಧಿ ಕಾರ್ಯಗಳು.

ಜಮೀನು, ಕಟ್ಟಡ, ಯಂತ್ರಗಳ ಸ್ಥಾಪನೆಗೆ ಬೇಕಾದ ಉತ್ಪತ್ತಿ ಬಂಡವಾಳ ರೂ. 50,000 ವರೆಗಿನ ಪರಿಮಿತಿಗೆ ಒಳಪಟ್ಟ ಕಸುಬುದಾರರು ಔದ್ಯೋಗಿಕ ಬ್ಯಾಂಕಿನಿಂದ ಪಡೆಯಬಹುದು. ಒಬ್ಬ ಕೈಗಾರಿಕೋದ್ಯಮಿ ಪಡೆಯಬಹುದಾದ ಗರಿಷ್ಠ ಸಾಲದ ಮಿತಿ ರೂ. 7.5 ಲಕ್ಷವಾಗಿದ್ದು ಒಬ್ಬ ಆರು ವಾಹನಗಳವರೆಗೂ ಕೊಳ್ಳಲು ಸಾಲ ಪಡೆಯಬಹುದು. ಬಡ್ಡಿದರ ಸಾಧಾರಣವಾಗಿ ಶೇಕಡ 14 ಆಗಿದ್ದು ಹಿಂದುಳಿದ ಪ್ರದೇಶದ ಕಸುಬುದಾರರು, ಗ್ರಾಮೋದ್ಯೋಗಿಗಳು ನಿಮ್ನ ವರ್ಗದವರು ಬುಡಕಟ್ಟು ಜನಾಂಗದವರು ಮತ್ತು ಅಂಗವಿಕಲರಿಗೆ ಶೇಕಡ 10ರಿಂದ 13½ವರೆಗೆ ರಿಯಾಯಿತಿ ಬಡ್ಡಿದರದ ಸೌಲಭ್ಯವಿದೆ. ಸಾಲದ ಮರುಪಾವತಿ ಅವಧಿ 3ರಿಂದ 10 ವರ್ಷವಾಗಿದೆ. ಸಾಲ ಪಡೆದ 10 ತಿಂಗಳಿಂದ 18 ತಿಂಗಳವರೆಗೆ ಅದರ ವಸೂಲಾತಿ ಪ್ರಾರಂಭವಾಗುವುದಿಲ್ಲ.

ಕೈಗಾರಿಕೆಗಳ ಅಭಿವೃದ್ಧಿಗೆ ಇಷ್ಟೆಲ್ಲ ನೆರವು ದೊರೆಯುತ್ತಿದ್ದರೂ ಹೆಚ್ಚಿನ ಸಂಖ್ಯೆಯಲ್ಲಿ ಪಟ್ಟಣ ಬ್ಯಾಂಕುಗಳು ಈ ನೆರವನ್ನು ಪಡೆಯಲು ಮುಂದೆ ಬರುತ್ತಿಲ್ಲ. ಕರ್ನಾಟಕದ 217 ಬ್ಯಾಂಕುಗಳಲ್ಲಿ ಕೇವಲ 2 ಬ್ಯಾಂಕುಗಳು—ಅಂದರೆ ಕರ್ನಾಟಕ ರಾಜ್ಯದ ಔದ್ಯೋಗಿಕ ಸಹಕಾರಿ ಬ್ಯಾಂಕ್ ನಿ., ಬೆಂಗಳೂರು ಮತ್ತು ಔದ್ಯೋಗಿಕ ಸಹಕಾರಿ ಬ್ಯಾಂಕ್ ನಿ., ಬೆಳಗಾಂವ್ ಮಾತ್ರ—ರಿಸರ್ವ್ ಬ್ಯಾಂಕಿನಿಂದ ಪುನರ್ಧನ ಸಾಲ ಪಡೆಯುತ್ತಲಿವೆ. ಅದರಂತೆ ಭಾರತದ ಕೈಗಾರಿಕಾಭಿವೃದ್ಧಿ ಬ್ಯಾಂಕಿನಿಂದ ಗ್ರೇನ್ ಮರ್ಚಂಟ್ಸ್ ಕೋ-ಆಪರೇಟಿವ್ ಬ್ಯಾಂಕ್, ಬೆಂಗಳೂರು, ರೆಡ್ಡಿ ಕೋ-ಆಪರೇಟಿವ್ ಬ್ಯಾಂಕ್, ಧಾರವಾಡ, ಗ್ರೇನ್ ಮರ್ಚಂಟ್ಸ್ ಕೋ-ಆಪರೇಟಿವ್ ಬ್ಯಾಂಕ್, ತುಮಕೂರು, ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್, ಸಿರ್ಸಿ' ನ್ಯಾಷನಲ್ ಕೊ-ಆಪರೇಟಿವ್ ಬ್ಯಾಂಕ್' ಬೆಂಗಳೂರು, ಗುರುಸಿದ್ದೇಶ್ವರ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಹುಬ್ಬಳ್ಳಿ—ಹೀಗೆ ರಾಜ್ಯದಲ್ಲಿ 6 ಬ್ಯಾಂಕುಗಳು ಮಾತ್ರ ಪುನರ್ಧನ ಸಾಲದ ಉಪಯೋಗ ಪಡೆಯುತ್ತವೆ. ಇದಕ್ಕೆ ಕಾರಣಗಳೆಂದರೆ :

1 ಸಾಲದ ವಸೂಲಾತಿಯ ತೊಂದರೆ,
2 ಈ ಬ್ಯಾಂಕುಗಳಲ್ಲಿ ಕೈಗಾರಿಕಾ ಸಾಲದ ಬಗ್ಗೆ ಆಳ ಅನುಭವ ಮತ್ತು ತಾಂತ್ರಿಕಜ್ಞಾನವಿರುವ ಅಧಿಕಾರಿಗಳ ಅಭಾವ,
3 ವಾಣಿಜ್ಯ ಬ್ಯಾಂಕುಗಳಿಂದ ಈ ಸಾಲ ಹಂಚುವ ಬಗ್ಗೆ ಇದ್ದ ಸ್ಪರ್ಧೆ,
4 ಕೈಗಾರಿಕಾ ಸಾಲ ಹಂಚುವ ಬಗ್ಗೆ ಬ್ಯಾಂಕುಗಳ ನಿರ್ದೇಶಕರಲ್ಲಿದ್ದ ನಿರಾಸಕ್ತಿ,
5 ಕೈಗಾರಿಕೆ ಕಸುಬುದಾರರಿಗೆ ಪಟ್ಟಣ ಬ್ಯಾಂಕುಗಳಲ್ಲಿ ಕಡಿಮೆ ಬಡ್ಡಿಗೆ ಸಾಲ ದೊರೆಯುವ ಬಗ್ಗೆ ಪ್ರಚಾರ ಹಾಗೂ ತಿಳಿವಳಿಕೆಯ ಅಭಾವ.

## ಆದ್ಯತಾವಲಯ ಹಾಗೂ ದುರ್ಬಲ ವರ್ಗ

ವಾಣಿಜ್ಯ ಬ್ಯಾಂಕುಗಳ ಸಾಮಾಜಿಕೀಕರಣ ಹಾಗೂ ರಾಷ್ಟ್ರೀಕರಣಗಳ ಮುಖ್ಯ ಉದ್ದೇಶ, ಸರ್ಕಾರಗಳ ಆದ್ಯತಾ ವಲಯಗಳ ಅಭಿವೃದ್ಧಿಗಾಗಿ, ಹರಿಜನ-ಗಿರಿಜನರ ಮತ್ತು ಇತರ ದುರ್ಬಲ ವರ್ಗಗಳ ಆರ್ಥಿಕ ಪ್ರಗತಿಗಾಗಿ ಹಮ್ಮಿಕೊಳ್ಳುವ ಅನೇಕ ಯೋಜನೆಗಳಿಗೆ ಈ ಬ್ಯಾಂಕುಗಳು ಹಣಕಾಸಿನ ನೆರವನ್ನು ಒದಗಿಸಿಕೊಡುವದಾಗಿದೆ. 1971ರಲ್ಲಿ ರಿಸರ್ವ್ ಬ್ಯಾಂಕ್ ನೇಮಿಸಿದ ವಾಣಿಜ್ಯ ಬ್ಯಾಂಕುಗಳ ಮುಂಗಡಗಳಿಗೆ ಸಂಬಂಧಿಸಿದ ಅಂಕಿ ಅಂಶ ಕುರಿತ ಔಪಚಾರಿಕ ಅಧ್ಯಯನ ತಂಡ ರಿಸರ್ವ್ ಬ್ಯಾಂಕಿಗೆ ಒಪ್ಪಿಸಿದ ವರದಿಯಲ್ಲಿ ಆದ್ಯತಾ ವಲಯಗಳು ಯಾವುವೆಂದು ಸೂಚಿಸಿತು. ಈ ಆದ್ಯತಾ ವಲಯಗಳಲ್ಲಿ ಏಕರೂಪತೆಯನ್ನು ತರಲು ರಿಸರ್ವ್ ಬ್ಯಾಂಕು ಮತ್ತೆ ಡಾ. ಕೃಷ್ಣಸ್ವಾಮಿಯವರ ನೇತೃತ್ವದಲ್ಲಿ ಆದ್ಯತಾವಲಯ ಸಾಲ ಮತ್ತು ಇಪ್ಪತ್ತು ಅಂಶಗಳ ಆರ್ಥಿಕ ಕಾರ್ಯಕ್ರಮದ ಕಾರ್ಯತಂಡವನ್ನು ನೇಮಿಸಿತು. ಆದ್ಯತಾ ವಲಯಗಳಿಗೆ ಸಾಲ ಹಂಚುವಲ್ಲಿ ಪಟ್ಟಣ ಸಹಕಾರಿ ಬ್ಯಾಂಕುಗಳ ಹಾಗೂ ಜಿಲ್ಲಾ ಮಧ್ಯವರ್ತಿ ಸಹಕಾರಿ ಬ್ಯಾಂಕುಗಳ ಪಾತ್ರವನ್ನು ಈ ಸಮಿತಿ ಎತ್ತಿ ತೋರಿಸಿದೆ.

## ಆದ್ಯತಾವಲಯದ ದುರ್ಬಲ ವರ್ಗಗಳ ಅಭಿವೃದ್ಧಿ ಹಾಗೂ ಪಟ್ಟಣ ಸಹಕಾರಿ ಬ್ಯಾಂಕುಗಳು

ಇಂದು ಸರ್ಕಾರ ದೇಶದ ಸಂಪೂರ್ಣ ಅಭಿವೃದ್ಧಿ ಸಾಧಿಸಬೇಕಾದರೆ ಆರ್ಥಿಕವಾಗಿ ಹಿಂದುಳಿದವರಿಗೆ

ಮತ್ತು ಆದ್ಯತಾವಲಯಗಳಿಗೆ ಹೆಚ್ಚು ಹಣ ವಿನಿಯೋಗಿಸಬೇಕೆಂದು ಸರ್ಕಾರ ನಿರ್ಧರಿಸಿದ್ದರಿಂದ ರಿಸರ್ವ್ ಬ್ಯಾಂಕು ಸಹಕಾರಿ ಬ್ಯಾಂಕುಗಳ ವಿನಿಯಮನ ಅಧಿನಿಯಮದ ಮೇರೆಗೆ ಎಲ್ಲ ಪಟ್ಟಣ ಬ್ಯಾಂಕುಗಳಿಗೆ 1983ರಲ್ಲಿ ಒಂದು ಆದೇಶ ಹೊರಡಿಸಿ ಈ ಬ್ಯಾಂಕುಗಳು ಒದಗಿಸುವ ಒಟ್ಟು ಸಾಲದಲ್ಲಿ ಶೇಕಡ 60ರಷ್ಟಕ್ಕೆ ಕಡಿಮೆಯಿಲ್ಲದಂತೆ ಸಾಲವನ್ನು ಮುಂದೆ ಸೂಚಿಸಿರುವ ಆದ್ಯತಾ ವಲಯಗಳಿಗೆ ಹಾಗೂ ದುರ್ಬಲ ವರ್ಗಗಳಿಗೆ ಹಂಚಬೇಕೆಂದು ಆದೇಶಿಸಿದೆ. ಇಂದು ರಿಸರ್ವ್ ಬ್ಯಾಂಕು ಆದ್ಯತಾವಲಯ ಹಾಗೂ ದುರ್ಬಲ ವರ್ಗಗಳ ಸಾಲದ ನೀತಿಯಲ್ಲಿ ಪಟ್ಟಣ ಬ್ಯಾಂಕುಗಳ ಬಗ್ಗೆ ಅತ್ಯಂತ ಬಿಗಿಯಾದ ಧೋರಣೆ ಅನುಸರಿಸುತ್ತಿದೆ. ಈ ಶೇಕಡ 60ರ ಗುರಿಯನ್ನು ಮುಟ್ಟದ ಪಟ್ಟಣ ಬ್ಯಾಂಕಿಗೆ ಬ್ಯಾಂಕಿಂಗ್ ವ್ಯವಹಾರದ ಮತ್ತು ಹೊಸ ಶಾಖೆಗಳನ್ನು ತೆರೆಯಲು ಲೈಸೆನ್ಸ್ ಕೊಡುವುದಿಲ್ಲವೆಂದು ಸ್ಪಷ್ಟಪಡಿಸಿದೆ. ಬ್ಯಾಂಕಿಂಗ್ ಲೈಸೆನ್ಸ್ ಹೊಂದಿದ ಬ್ಯಾಂಕುಗಳಿಗೆ ಅವು ಶೇ. 60 ರಷ್ಟು ಸಾಲವನ್ನು ಈ ವಲಯಗಳಿಗೆ ಹಂಚದಿದ್ದರೆ ಅವುಗಳಿಗೆ ಹೊಸ ಶಾಖೆ ತೆರೆಯಲು ರಿಸರ್ವ್ ಬ್ಯಾಂಕಿನಿಂದ ಪರವಾನಗಿ ಸಿಗಲಾರದು.

## ಆದ್ಯತಾ ವಲಯ, ದುರ್ಬಲ ವರ್ಗಗಳೆಂದರೆ ಯಾವುವು?

ಭಾರತದ ರಿಸರ್ವ್ ಬ್ಯಾಂಕು ಪಟ್ಟಣ ಸಹಕಾರಿ ಬ್ಯಾಂಕುಗಳಿಗೆ ಸಂಬಂಧಿಸಿದಂತೆ ಒಟ್ಟು 9 ವಲಯಗಳನ್ನು ಆದ್ಯತಾವಲಯಗಳೆಂದು ಗುರುತಿಸಿದೆ. ಕೆಲವೊಂದು ಆರ್ಥಿಕ ಚಟುವಟಿಕೆಗಳನ್ನು ಆದ್ಯತಾ ವಲಯಗಳು ಒಳಗೊಳ್ಳುವವೊ ಅಥವಾ ಇಲ್ಲವೊ ಎಂಬುದರ ಬಗ್ಗೆ ಆ ಚಟುವಟಿಕೆಗಳಿಗೆ ಹಂಚಿದ ಸಾಲ ಹಾಗೂ ಮುಂಗಡಗಳ ಮೊತ್ತದ ಮೇಲಿಂದ ನಿರ್ಧರಿಸಲಾಗುತ್ತದೆ. ಹಂಚಲಾಗುವ ಸಾಲ ಹಾಗೂ ಮುಂಗಡಗಳ ಆಧಾರದ ಮೇಲೆ ಆದ್ಯತಾ ವಲಯಗಳಲ್ಲಿಯೇ ದುರ್ಬಲ ವರ್ಗಗಳನ್ನು ರಿಸರ್ವ್ ಬ್ಯಾಂಕು ವಿಭಾಗೀಕರಣಗೊಳಿಸಿದೆ. ಆದರೆ ಶಿಕ್ಷಣಕ್ಕಾಗಿ ಕೊಡುವ ಸಾಲಕ್ಕೆ ಸಾಲಗಾರನ ಮಾಸಿಕ ವರಮಾನದ ಆಧಾರದ ಮೇಲೆ ದುರ್ಬಲ ವರ್ಗಗಳೆಂದು ಗುರುತಿಸಲಾಗುವುದು. ಹಂಚಲಾಗುವ ಸಾಲ ಹಾಗೂ ಮುಂಗಡಗಳ ಒಟ್ಟು ಮೊತ್ತದ ಮೇಲೆ ಅದು ಆದ್ಯತಾವಲಯದ ಸಾಲ, ದುರ್ಬಲ ವರ್ಗಗಳ ಸಾಲ ಎಂದು ಗುರುತಿಸಲಾಗುವುದೇ ಹೊರತು, ಸಾಲಗಾರನ ಅಂತಸ್ತು, ಅವನ ಜೀವನದ ಮಟ್ಟ, ಅವನು ಹೊಂದಿದ ಆಸ್ತಿಪಾಸ್ತಿ ಮುಂತಾದುವುಗಳ ಮೇಲೆ ಗುರುತಿಸಲು ಅವಕಾಶವಿಲ್ಲದಿರುವುದರಿಂದ ರಿಸರ್ವ್ ಬ್ಯಾಂಕು ನಿಗದಿಪಡಿಸಿದ ಆದ್ಯತಾವಲಯ ಹಾಗೂ ದುರ್ಬಲ ವರ್ಗಗಳ ಪಟ್ಟಿ ಒಂದು ವಿಪರ್ಯಾಸವೇ ಸರಿ.

## ಸ್ಥಾಯಿ ಸಲಹಾ ಸಮಿತಿಯ ಶಿಫಾರಸುಗಳು

ರಿಸರ್ವ್ ಬ್ಯಾಂಕಿನ ಸ್ಥಾಯಿ ಸಲಹಾ ಸಮಿತಿ ಈ ಬಗ್ಗೆ ಕೆಳಗಿನ ಶಿಫಾರಸುಗಳನ್ನು ಮಾಡಿದೆ. ಅವುಗಳನ್ನು ರಿಸರ್ವ್ ಬ್ಯಾಂಕು ಒಪ್ಪಿ ಕೆಳಗಿನ ಮಾರ್ಗದರ್ಶಿಗಳನ್ನು ಈ ಬ್ಯಾಂಕುಗಳಿಗೆ 1983 ರಲ್ಲಿ ಕಳಿಸಿದೆ.

1 ಪ್ರತಿಯೊಂದು ಪಟ್ಟಣ ಬ್ಯಾಂಕು ಅದು ಹಂಚುವ ಒಟ್ಟು ಸಾಲ ಹಾಗೂ ಮುಂಗಡಗಳಲ್ಲಿ ಶೇ. 60ಕ್ಕಿಂತ ಕಡಿಮೆಯಿಲ್ಲದೆ ಆದ್ಯತಾವಲಯ ಹಾಗೂ ದುರ್ಬಲ ವರ್ಗಗಳಿಗೆ ಹಂಚಬೇಕು. ಈ ಮಿತಿಯನ್ನು ಎಲ್ಲ ಬ್ಯಾಂಕುಗಳು 1987ರ ಒಳಗಾಗಿ ಮುಟ್ಟಬೇಕು.

2 ಈ ಒಟ್ಟು ಶೇ. 60ರಲ್ಲಿ ಶೇ. 25 ಅಥವಾ ಇದು ಹಂಚಿದ ಒಟ್ಟು ಸಾಲ ಹಾಗೂ ಮುಂಗಡದಲ್ಲಿ ಶೇ. 15ಕ್ಕಿಂತ ಕಡಿಮೆಯಿಲ್ಲದಂತೆ ದುರ್ಬಲ ವರ್ಗಗಳಿಗೆ ಹಂಚಬೇಕು.

3 ಆದ್ಯತಾ ವಲಯ ಹಾಗೂ ದುರ್ಬಲ ವರ್ಗಗಳಿಗೆ ಹಂಚಿದ ಸಾಲಗಳ ಬಗ್ಗೆ ಪ್ರತ್ಯೇಕವಾಗಿ ಲೆಕ್ಕಪತ್ರಗಳನ್ನಿಡಬೇಕು. ಕಾರಣ ರಿಸರ್ವ್ ಬ್ಯಾಂಕು ಹಾಗೂ ಪಟ್ಟಣ ಬ್ಯಾಂಕುಗಳ ಮಹಾಮಂಡಳಕ್ಕೆ ಇದರಿಂದ ಈ ಬಗ್ಗೆ ಇದ್ದ ಪ್ರಗತಿಯನ್ನು ಪರಿಶೀಲಿಸಲು ಅನುಕೂಲವಾಗುತ್ತದೆ.

4 ರೂ. 5 ಕೋಟಿಗಿಂತ ಅಧಿಕ ದುಡಿಯುವ ಬಂಡವಾಳ ಹೊಂದಿರುವ ಬ್ಯಾಂಕುಗಳು ಈ ಸಾಲದ ಪ್ರಗತಿಯ ಬಗ್ಗೆ ರಿಸರ್ವ್ ಬ್ಯಾಂಕು ಸ್ವತಃ ಕಾಲಕಾಲಕ್ಕೆ ಪರಿಶೀಲಿಸಿ ಮುನ್ನೆಚ್ಚರಿಕೆ ಕೊಡುವುದು. ಇಂಥ ಬ್ಯಾಂಕುಗಳು ಈ ಸಾಲದ ಪ್ರಗತಿಯ ಬಗ್ಗೆ ಪ್ರತಿ ವರ್ಷ ಎರಡು ಬಾರಿ, ಅಂದರೆ ಜೂನ್ 30 ಮತ್ತು ಡಿಸೆಂಬರ್ 31, ಅಂದರೆ 6 ತಿಂಗಳ ಪ್ರಗತಿಯ ಬಗ್ಗೆ, ಲೆಕ್ಕ ಪತ್ರಗಳನ್ನು ರಿಸರ್ವ್ ಬ್ಯಾಂಕಿನ ಕೇಂದ್ರ ಕಛೇರಿ ಮುಂಬೈಗೆ ನೇರವಾಗಿ ಕಳಿಸಬೇಕು ಹಾಗೂ ಅದರ ಪ್ರತಿಯನ್ನು ಪ್ರಾದೇಶಿಕ ಕಛೇರಿಗೆ ಕಳಿಸಬೇಕು. ರೂ. 5 ಕೋಟಿಗಿಂತ ಕಡಿಮೆ ದುಡಿಯುವ ಬಂಡವಾಳ ಹೊಂದಿದ ಬ್ಯಾಂಕುಗಳು ಈ ಬಗ್ಗೆ ಇದ್ದ ಲೆಕ್ಕದ ಮಾಹಿತಿ ಪತ್ರಗಳನ್ನು ರಿಸರ್ವ್ ಬ್ಯಾಂಕಿನ ಪ್ರಾದೇಶಿಕ ಕಛೇರಿಗೆ ಹಾಗೂ ಪಟ್ಟಣ ಬ್ಯಾಂಕುಗಳ ಮಹಾಮಂಡಳಕ್ಕೆ ಕಳಿಸಿಕೊಡಬೇಕು. ರೂ. 5 ಕೋಟಿಗಿಂತ ಕಡಿಮೆ ಇದ್ದ ಪಟ್ಟಣ ಬ್ಯಾಂಕುಗಳ ಆದ್ಯತಾ ವಲಯಗಳ ಸಾಲದ ಪ್ರಗತಿಯನ್ನು ಪರಿಶೀಲಿಸುವ ಹಾಗೂ ಮುಖ್ಯಸ್ಥತೆ ಹೊಂದುವ ನೈತಿಕ ಜವಾಬ್ದಾರಿಯನ್ನು ಪಟ್ಟಣ ಬ್ಯಾಂಕುಗಳ ಮಹಾಮಂಡಳಕ್ಕೆ ಕೊಟ್ಟಿರುವುದು ಖಚಿತವಾಗಿದೆ.

5 ರಿಸರ್ವ್ ಬ್ಯಾಂಕು ಈ ಸಾಲಗಳ ಬಗ್ಗೆ ಪ್ರತ್ಯೇಕವಾಗಿ ಲೆಕ್ಕ ಪತ್ರ ಇಡಲು ಅನುಕೂಲವಾಗುವಂತೆ ಮಾದರಿಯ ಮಾಹಿತಿ ಲೆಕ್ಕ ಪತ್ರಗಳನ್ನು, ರಿಜಿಸ್ಟರುಗಳನ್ನು ತಯಾರಿಸಿ ಒದಗಿಸಿದೆ.

ಬಡ್ಡಿದರ : ಸಾಮಾನ್ಯವಾಗಿ ಕಿರುಕುಳ ವ್ಯಾಪಾರ, ಸಣ್ಣ ಉದ್ದಿಮೆಗಳನ್ನು ಬಿಟ್ಟು ಉಳಿದ ಎಲ್ಲ ಆದ್ಯತಾವಲಯಗಳಿಗೆ ಹಂಚಲಾಗುವ ಸಾಲ ಹಾಗೂ ಮುಂಗಡಗಳ ಮೇಲಿನ ಬಡ್ಡಿದರ, ಆದ್ಯತಾ ವಲಯಗಳಲ್ಲದ ಚಟುವಟಿಕೆಗಳಿಗಾಗಿ ಒದಗಿಸುವ ಸಾಲ ಹಾಗೂ ಮುಂಗಡಗಳ ಮೇಲಿನ ಬಡ್ಡಿ ದರಕ್ಕಿಂತ ಕಡಿಮೆ ಇರುವುದಿಲ್ಲ. ಆದ್ದರಿಂದ ಆದ್ಯತಾ ವಲಯಗಳಿಗೆ ಅಧಿಕವಾಗಿ ಸಾಲ ಹಂಚುವುದರಿಂದ ಈ ಬ್ಯಾಂಕುಗಳಿಗೆ ಏನೂ ಹಾನಿಯಾಗುವುದಿಲ್ಲ.

[ವಿವರಕ್ಕೆ 13ನೇ ಪುಟ ನೋಡಿ]

## ಸಣ್ಣ ವ್ಯಾಪಾರೋದ್ಯಮಗಳು

ಸಣ್ಣ ಪ್ರಮಾಣದ ವರ್ತಕರು ಅಂದರೆ ಪೀಠೋಪಕರಣಗಳಲ್ಲಿ ರೂ. 2 ಲಕ್ಷಕ್ಕೆ ಮೀರದಂತೆ ಮತ್ತು ದುಡಿಯುವ ಬಂಡವಾಳ ರೂ. 1 ಲಕ್ಷಕ್ಕೆ ಮೀರದಂತೆ ಹೂಡಿ ವ್ಯಕ್ತಿಗತವಾಗಿ ಅಥವಾ ಪಾಲುಗಾರಿಕೆಯಿಂದ ವ್ಯಾಪಾರ ಮಾಡುವಂತಹವರು,

ಉದಾಹರಣೆ :

1 ದಲಾಲಿ ಪಡೆದು ಪದಾರ್ಥಗಳನ್ನು ಮಾರಾಟ ಮಾಡುವ ಏಜೆಂಟರು,
2 ಸಾಮಾನುಗಳ ಸಾಗಾಣಿಕೆ ಉದ್ಯಮದಲ್ಲಿ ನಿರತರಾಗಿರುವವರು,
3 ಸ್ಥಿರ ಸ್ವತ್ತುಗಳ ಏಜೆಂಟರು,
4 ಮುದ್ರಣ, ಪ್ರಕಟನಾಲಯ, ಇತ್ಯಾದಿ,
5 ಹೇರ್ ಡ್ರೆಸ್ಸಿಂಗ್ ಸಲೂನ್,
6 ಹೊಟೆಲ್, ಕ್ಯಾಂಟೀನ್, ಭೋಜನಾಲಯ,
7 ಮೋಟಾರು ವಾಹನಗಳ ರಿಪೇರಿ, ರಿಫ್ರಿಜಿರೇಟರ್ ರಿಪೇರಿ ಇತ್ಯಾದಿ.

## ಉದ್ಯೋಗಸ್ಥರು ಮತ್ತು ಸ್ವಂತ ಉದ್ದಿಮೆದಾರರು

ಈ ವರ್ಗದ ಜನಗಳ ಸಾಲದ ಪರಿಮಿತಿ ರೂ. 2 ಲಕ್ಷವನ್ನು ಮೀರಿರಕೂಡದು. ಆ ಪೈಕಿ ರೂ. 1 ಲಕ್ಷ ದುಡಿಯುವ ಬಂಡವಾಳವಿರಬೇಕು. ಸ್ವಯಂ ಉದ್ಯೋಗ ಮಾಡುವ ಜನಗಳಿಗೆ ಈ ಸಾಲ ಕೊಡಬಹುದು. ಅಂದರೆ ಅವರು ಆ ವೃತ್ತಿಯಲ್ಲಿ ಅರ್ಹತೆ ಮತ್ತು ಅನುಭವ, ಕುಶಲತೆ ಪಡೆದಿರಬೇಕು. ದಂತ ವೈದ್ಯರು, ಇತರ ವೈದ್ಯರುಗಳು, ಚಾರ್ಟರ್ಡ್ ಅಕೌಂಟೆಂಟ್ ಅಥವಾ ಕಾಸ್ಟ್ ಅಕೌಂಟೆಂಟರು, ವಕೀಲರು, ಇಂಜನಿಯರರು, ವಾಸ್ತುಶಿಲ್ಪಿಗಳು (ಆರ್ಕಿಟೆಕ್ಟ್‌ಗಳು), ಸರ್ವೆಯರುಗಳು, ಮನೆ ಕಟ್ಟುವ ಕಂಟ್ರಾಕ್ಟರುಗಳು, ತಾಂತ್ರಿಕ ಅರ್ಹತೆ ಮತ್ತು ಸರ್ಕಾರದವರಿಂದ ಅಂಗೀಕೃತವಾದ ಡಿಪ್ಲೊಮಾ ಅಥವಾ ಪದವಿ ಪಡೆದವರು ಬ್ಯಾಂಕಿನಿಂದ ಸಾಲ ಪಡೆಯಲು ಅರ್ಹರೆಂದು ಪರಿಗಣಿಸಬಹುದು.

## ಆದ್ಯತಾ ವಲಯಗಳು ಹಾಗೂ ದುರ್ಬಲ ವರ್ಗಗಳ ವರ್ಗೀಕರಣದ ಪಟ್ಟಿ

| ಆದ್ಯತಾ ವಲಯಗಳು | ದುರ್ಬಲ ವರ್ಗಗಳು |
|---|---|
| 1 ಕೃಷಿಗೆ ಸಂಬಂಧಪಟ್ಟ ಚಟುವಟಿಕೆಗಳು. | 1 ರೂ. 10 ಸಾವಿರವನ್ನು ಮೀರದಂತೆ ಸಾಲ. |
| 2 ಗೃಹ ಹಾಗೂ ಸಣ್ಣ ಕೈಗಾರಿಕೆಗಳು ಮತ್ತು ಅಭಿವೃದ್ಧಿ ಹೆಚ್ಚಿಸಲು ಹೊಸದಾಗಿ ವಿದ್ಯುತ್ ಪಡೆಯಲು ಅಥವಾ ಮುಂದುವರಿಸಲು. | 2 ರೂ. 25 ಸಾವಿರವನ್ನು ಮೀರದಂತೆ ಸಾಲ |
| 3 ರಸ್ತೆ ಸಾರಿಗೆ, ನೀರು ಸರಬರಾಜು ವಾಹನ ಖರೀದಿಸಲು. | 3 ಸೈಕಲ್ ರಿಕ್ಷಾ, ಆಟೋರಿಕ್ಷಾ, ಸಣ್ಣ ದೋಣಿ ಕೊಳ್ಳಲು ಹಾಗೂ ಅವುಗಳ ರಿಪೇರಿ ಮಾಡಿಸಲು ಮತ್ತು ಅವುಗಳ ಬಿಡಿಭಾಗ ಕೊಳ್ಳಲು ರೂ. 30 ಸಾವಿರದ ವರೆಗೆ |
| 4 (i) ದಿನಬಳಕೆಯ ಪದಾರ್ಥಗಳನ್ನು ಮಾರುವ ಖಾಸಗಿ ಚಿಲ್ಲರೆ ವರ್ತಕರು (ನ್ಯಾಯಬೆಲೆ ಅಂಗಡಿಗಳು) | 4 ರೂ. 20 ಸಾವಿರ ಮೀರದಂತೆ ಸಾಲ |
| (ii) ಇತರ ಚಿಲ್ಲರೆ ವ್ಯಾಪಾರಸ್ಥರು (ರೂ. 50 ಸಾವಿರ ಮೀರದಂತೆ) | ರೂ. 20 ಸಾವಿರ ಮೀರದಂತೆ ಸಾಲ |
| 5 ಸಣ್ಣ ವ್ಯಾಪಾರೋದ್ದಿಮೆಗಳು | 5 ರೂ. 20 ಸಾವಿರ ಮೀರದಂತೆ ಸಾಲ |
| 6 ಸ್ವಯಂ ಉದ್ಯೋಗಸ್ಥರು ಹಾಗೂ ವೃತ್ತಿನಿರತರು | 6 ರೂ. 20 ಸಾವಿರ ಮೀರದಂತೆ ಸಾಲ |
| 7 ವಿದ್ಯಾಭ್ಯಾಸದ ಸಲುವಾಗಿ | 7 ಮಾಸಿಕ ವರಮಾನ ರೂ. 600 ಮೀರದಂತೆ |
| 8 ಮನೆ ಕಟ್ಟಲು ರೂ. 25 ಸಾವಿರ ಮೀರದಂತೆ | 8 ನಿಮ್ನ ವರ್ಗ ಬುಡಕಟ್ಟಿನ ಜನಾಂಗ ಮತ್ತು ಮಹಿಳೆಯರಿಗೆ ಆದ್ಯತಾವಲಯಗಳಿಗೆ ಸೂಚಿಸಿದ ಮಿತಿಯ ವರೆಗೆ ಕೊಡುವ ಸಾಲಗಳು |
| 9 ಪ್ರತಿ ವ್ಯಕ್ತಿಗೆ ರೂ. 500ರ ವರೆಗೆ ಕೊಡುವ ಬಳಕೆದಾರರ ಸಾಲಗಳು. | 9 ನಿಮ್ನ ವರ್ಗ, ಬುಡಕಟ್ಟು ಜನ ಮತ್ತು ಮಹಿಳೆಯರಿಗೆ ಆದ್ಯತಾ ವಲಯಗಳಿಗೆ ಸೂಚಿಸಿದ ಮಿತಿಯ ವರೆಗೆ ಕೊಡುವ ಸಾಲ |

**ಟಿಪ್ಪಣಿ :** ಮೇಲ್ಕಂಡ 1ರಿಂದ 6ರ ವರೆಗಿನ ನಿಮ್ನ ವರ್ಗಗಳಿಗೆ ಬುಡಕಟ್ಟು ಜನಾಂಗಗಳಿಗೆ ಮತ್ತು ಮಹಿಳೆಯರಿಗೆ ಕೊಟ್ಟ ಸಾಲಗಳು ಕಾಲಂ ಎರಡರಲ್ಲಿ ಹೇಳಿದವುಗಳ ಜೊತೆಗೆ ಇವುಗಳನ್ನು ದುರ್ಬಲ ವರ್ಗಗಳಿಗೆ ಕೊಟ್ಟ ಸಾಲಗಳೆಂದು ಪರಿಗಣಿಸಲಾಗುವುದು.

### ವಿಶೇಷ ಸೂಚನೆ

| | | |
|---|---|---|
| 1 ಕೃಷಿ ಕೈಗಾರಿಕೆಗಳು | : | ಹೈನುಗಾರಿಕೆ, ಮೀನುಗಾರಿಕೆ, ಕೋಳಿ ಸಾಕಾಣಿಕೆ ಹಂದಿ ಸಾಕಣೆ, ಜೇನು ಪೋಷಣೆ, ರೇಷ್ಮೆ, ಎತ್ತುಗಾಡಿ ಕೊಳ್ಳುವದು |
| 2 ಗೃಹ ಕೈಗಾರಿಕೆಗಳು | : | ಫಲಾನುಭವಿಗಳು ಸಾಮಾನ್ಯವಾಗಿ ಸ್ಥಳದಲ್ಲಿ ದೊರೆಯುವ ಪದಾರ್ಥಗಳನ್ನು ರೂಪಾಂತರಿಸುವುದು ಅಥವಾ ಸಂಸ್ಕರಣ ಕಾರ್ಯಗಳಲ್ಲಿ ನಿರತವಾಗಿರುವುದು. |
| 3 ಸಣ್ಣ ಕೈಗಾರಿಕೆಗಳು | : | ಯಂತ್ರೋಪಕರಣಗಳಲ್ಲಿ ರೂ. 35 ಲಕ್ಷದ ವರೆಗೆ ಬಂಡವಾಳ ಹೂಡಿರುವ ಉತ್ಪಾದನ ಅಥವಾ ಸಂಸ್ಕರಣ ಘಟಕಗಳು–ಪೂರಕ ಘಟಕಗಳಿಗೆ ರೂ. 45 ಲಕ್ಷ ಪರಿಮಿತಿ ಇದೆ. |

ಮೇಲೆ ತಿಳಿಸಿರುವವರಲ್ಲದೆ ಜೆರಾಕ್ಸ್ ನಡೆಸುವವರು, ಸಣ್ಣ ಟೀ ಸ್ಟಾಲ್ ಇಡುವವರು, ಮರಗೆಲಸ ಮಾಡುವವರು, ಕೊಳಾಯಿ ಕೆಲಸ ಮಾಡುವವರು, ಬಟ್ಟೆ ತೊಳೆದು ಇಸ್ತ್ರಿ ಮಾಡುವವರು, ತರಕಾರಿ, ಹಣ್ಣು, ಮೊಟ್ಟೆ, ಮೀನು ಮಾರಾಟ ಮಾಡುವವರು, ಮೇದಾರರು, ಜರಿಗೆಲಸ, ಉಡುಪು ತಯಾರಿಕೆ ಮತ್ತು ಮಾರಾಟ ಮಾಡುವವರು ಈ ವರ್ಗಕ್ಕೆ ಸೇರುವವರು.

### ವಿದ್ಯಾಭ್ಯಾಸಕ್ಕಾಗಿ ಸಾಲಗಳು

ಶಿಕ್ಷಣ ಸಂಸ್ಥೆಗಳ ಹೊರತು, ಬಿಡಿ ವ್ಯಕ್ತಿಗಳಿಗೆ ವಿದ್ಯಾಭ್ಯಾಸ ಉದ್ದೇಶಗಳಿಗೆ ಕೊಡುವ ಸಾಲಗಳು ಈ ವಿಶೇಷ ಯೋಜನೆಯ ವ್ಯಾಪ್ತಿಗೆ ಬರುತ್ತವೆ.

### ಮನೆ ಕಟ್ಟಲು ಸಾಲಗಳು

ಮನೆ ಕಟ್ಟುವುದು, ವಿಸ್ತರಿಸುವುದು, ರೂಪ ಬದಲಾವಣೆ ಮತ್ತು ದುರಸ್ತಿ ವಗೈರೆ ಕೆಲಸಗಳನ್ನು ಕೈಗೊಳ್ಳುವವರಿಗೆ ಈ ಸಾಲಗಳನ್ನು ಕೊಡಬಹುದು. ನಿಮ್ನ ವರ್ಗ ಮತ್ತು ಬುಡಕಟ್ಟಿನ ಜನಾಂಗದವರಿಗೆ ಒಬ್ಬರಿಗೆ ರೂ. 10 ಸಾವಿರ ಸಾಲದ ಪರಿಮಿತಿ ಮೀರದಿದ್ದರೆ ಅಂತಹ ಸಾಲಗಳು ಮತ್ತು ಕೊಳಚೆ ಪ್ರದೇಶಗಳಲ್ಲಿ ವಾಸಿಸುವವರ ಪುನರ್ವಸತಿಗಾಗಿ ಕೊಡುವ ಸಾಲಗಳು ಈ ವರ್ಗದಲ್ಲಿ ಬರುತ್ತವೆ. ಅವುಗಳನ್ನು ದುರ್ಬಲ ವರ್ಗದವರಿಗೆ ಕೊಡುವ ಸಾಲಗಳೆಂದು ಪರಿಗಣಿಸಲಾಗಿದೆ.

### ಬಳಕೆದಾರರ ಸಾಲಗಳು

ಈ ವರ್ಗದಲ್ಲಿ ಬಳಕೆಗೋಸ್ಕರ ಕೊಟ್ಟ ಸಾಲಗಳು, ವೈದ್ಯಕೀಯ ಖರ್ಚುಗಳು, ಲಗ್ನದ ಖರ್ಚುಗಳು, ಮರಣ, ಜನನ, ಉತ್ತರಕ್ರಿಯೆಗಳು ಇತ್ಯಾದಿ ಬಾಬ್ತುಗಳಿಗೆ ಕೊಡುವ ಸಾಲಗಳು ಸೇರುತ್ತವೆ. ದೇಶದ ಸರ್ವತೋಮುಖ ಅಭಿವೃದ್ಧಿಗಾಗಿ ಪಟ್ಟಣ ಬ್ಯಾಂಕುಗಳು ವಿಶಿಷ್ಟ ಪಾತ್ರ ವಹಿಸಬಲ್ಲವೆಂದು ಸರ್ಕಾರ ಹಾಗೂ ರಿಸರ್ವ್ ಬ್ಯಾಂಕು ಹೆಚ್ಚು ಭರವಸೆ ಹೊಂದಿವೆ. ಹಿಂದುಳಿದವರಿಗೆ ಮತ್ತು ಆದ್ಯತಾವಲಯಕ್ಕಾಗಿ ಹಾಗೂ ರಾಷ್ಟ್ರದ ಅಭಿವೃದ್ಧಿಗಾಗಿ ಇನ್ನೂ ಹೆಚ್ಚಿನ ಸೇವೆ ಈ ಬ್ಯಾಂಕುಗಳಿಂದ ಸಲ್ಲಲೆಂದು ಹಾರೈಸಬಹುದು. ★


'ಬ್ಯಾಂಕಿಂಗ್ ಪ್ರಪಂಚ'ಕ್ಕೆ
ಆಜೀವ
ಚಂದಾದಾರರಾಗಿರಿ

# ಬ್ಯಾಂಕುಗಳ ಗ್ರಾಹಕ ಸೇವೆ ಹಾಗೂ ನಿಯಮಗಳ ಆಚರಣೆಯಲ್ಲಿ ಏಕರೂಪತೆ

**ಪ್ರಮುಖ ಬ್ಯಾಂಕುಗಳ ರಾಷ್ಟ್ರೀಕರಣವಾದರೂ ಅವುಗಳಲಿ ವಿಭಿನ್ನತೆ ಉಳಿದೇ ಇದೆ. ಗ್ರಾಹಕ ಸೇವೆಯಲ್ಲಿ ಏಕರೂಪತೆಯ ನಿಯಮಗಳಿದ್ದರೂ ಇವುಗಳ ಜಾರಿಯಲ್ಲಿ ಬ್ಯಾಂಕಿನಿಂದ ಬ್ಯಾಂಕಿಗೆ ವ್ಯತ್ಯಾಸವಿದೆ. ಇದರಿಂದ ಗ್ರಾಹಕನಿಗೆ ತೊಂದರೆ.**

ಅನಂತ ಹೆಗಡೆ
**ಮೈಸೂರು ಬ್ಯಾಂಕ್, ಬಂಗೂರು ನಗರ ಶಾಖೆ**
**ದಾಂಡೇಲಿ (ಉ. ಕ.) 581 362**

ಬ್ಯಾಂಕುಗಳು ತಮ್ಮ ವ್ಯಾಪಕ ಚಟುವಟಿಕೆ, ವಹಿವಾಟುಗಳಿಂದ ದೇಶದ ಅರ್ಥವ್ಯವಸ್ಥೆಯ ನರನಾಡಿಯಾಗಿವೆ. ಬ್ಯಾಂಕಿಂಗ್ ವ್ಯವಸ್ಥೆ ನಿತ್ಯದ ಅನಿವಾರ್ಯವಾಗಿ ಮಾರ್ಪಟ್ಟಿದೆ.

ಇಂದು ಭಾರತದಲ್ಲಿ ಭಾರತೀಯ ಸ್ಟೇಟ್ ಬ್ಯಾಂಕ್, ಇದರ ಸಹವರ್ತಿ ಬ್ಯಾಂಕುಗಳು ಮತ್ತು ರಾಷ್ಟ್ರೀಕೃತ ಬ್ಯಾಂಕುಗಳು ಸೇರಿ ಇವುಗಳ ಶಾಖೆಗಳು 59 ಸಾವಿರಕ್ಕೂ ಮಿಕ್ಕಿವೆ. ಅಂದರೆ ಪ್ರತಿ 13 ಸಾವಿರ ಜನಸಂಖ್ಯೆಗೆ ಒಂದು ಶಾಖೆ ಒಟ್ಟು ಠೇವಣಿ ಸುಮಾರು ರೂ. 142 ಸಾವಿರ ಕೋಟಿ ಮೀರಿದರೆ, ಮುಂಗಡಗಳು 87 ಸಾವಿರ ಕೋಟಿಯನ್ನು ದಾಟಿವೆ. ಇದೆಲ್ಲವೂ ಪ್ರತಿದಿನವೂ ಬ್ಯಾಂಕುಗಳು ಖಾತೆದಾರರಿಂದ ಪಡೆಯುವ ಹಣದಿಂದ ಅದರಲ್ಲಿ ಸ್ವಲ್ಪ ಅಂಶವನ್ನು ಸಾಲವಾಗಿ ಹೆಚ್ಚಿನ ಬಡ್ಡಿಗೆ ಕೊಡುವ ಮೂಲಕ ಸಾಧ್ಯವಾಗಿದೆ. ಆದರೆ ಇವೆರಡೇ ಇವುಗಳ ಕೆಲಸವಾಗಿರದೆ ಹಲವಾರು ವಿಭಿನ್ನ ಗ್ರಾಹಕ ಸೇವೆಗಳನ್ನು ಇವು ಇಂದು ಮಾಡುತ್ತಲಿವೆ. ಸಮಾಜದ ಅಗತ್ಯಗಳಿಗೆ ಶೀಘ್ರವಾಗಿ ಸ್ಪಂದಿಸುತ್ತಿವೆ.

ಆದರೆ ಇವುಗಳ ಸೇವೆ ಭಿನ್ನ. ಬ್ಯಾಂಕಿಂದ ಬ್ಯಾಂಕಿಗೆ ವ್ಯತ್ಯಾಸ. ಎಲ್ಲ ಅನುಸೂಚಿತ ಬ್ಯಾಂಕುಗಳ ಸೇವಾ ಶುಲ್ಕ, ಠೇವಣಿಯ ಮೇಲೆ ಬಡ್ಡಿ ನಿಯಮಗಳಲ್ಲಿ ಈಗ ಸ್ವಲ್ಪಮಟ್ಟಿಗೆ ಸಾಮ್ಯವಿದೆ. ಗ್ರಾಹಕ ಸೇವೆಯ ಮೇಲೆ ಅಧ್ಯಯನ ನಡೆಸಿದ ತಲ್ವಾರ್ ಸಮಿತಿ 176 ಶಿಫಾರಸುಗಳನ್ನು ಮಾಡಿ ಎಲ್ಲ ಬ್ಯಾಂಕುಗಳಿಗೆ ಏಕರೂಪತೆಯನ್ನು ಸೂಚಿಸಿತು.

ಅವುಗಳಲ್ಲಿ 138ಶಿಫಾರಸುಗಳನ್ನು ಬ್ಯಾಂಕುಗಳು ಏಕರೂಪದ ಆಚರಣೆಗೆ ಒಪ್ಪಿವೆ. ಸೇವಾಶುಲ್ಕ, ರಿವಾಜುಗಳಲ್ಲಿ ಸಾಮ್ಯತೆ, ಗ್ರಾಹಕ ಹಿತ ಸಾಧಿಸುವುದೇ ಇದರ ಧ್ಯೇಯ. ಇಷ್ಟಾದರೂ ಸಾರ್ವಜನಿಕರಿಗೆ ಬ್ಯಾಂಕುಗಳಲ್ಲಿಯ ವಿಭಿನ್ನತೆ ಅನನುಕೂಲಕ್ಕೆಡೆಮಾಡಿದೆ.

ಇವುಗಳಲ್ಲಿಯ ಪರಸ್ಪರ ಪೈಪೋಟಿಯಿಂದಾಗಿ ಗ್ರಾಹಕಸೇವೆ ಉತ್ತಮವಾಗಿರಲೆಂಬ ಉದ್ದೇಶಕ್ಕಾಗಿ, ಉಳಿದ ಆಡಳಿತಾತ್ಮಕ ತೊಡಕಿನಿಂದಾಗಿ ಸರ್ಕಾರ ರಾಷ್ಟ್ರೀಕರಣದ ಅನಂತರವೂ ಆಯಾ ಬ್ಯಾಂಕುಗಳ ಅಸ್ತಿತ್ವಗಳನ್ನು ಉಳಿಸಿದೆ. ಆದರೆ ಸರ್ಕಾರದ ನೀತಿಗಳಿಗನುಗುಣವಾಗಿ ಏಕರೂಪ ಕಾರ್ಯಕ್ರಮಗಳನ್ನು ನಿರ್ದೇಶಿಸಿದ್ದರೂ, ರಿಸರ್ವ್ ಬ್ಯಾಂಕ್ ನಿಯಂತ್ರಿಸಿದರೂ ಬ್ಯಾಂಕುಗಳ ಕೆಲಸ-ಕಾರ್ಯಗಳಲ್ಲಿ ವ್ಯತ್ಯಾಸಗಳು ಇನ್ನೂ ಉಳಿದಿವೆ.

ಒಂದು ಬ್ಯಾಂಕಿನಲ್ಲಿ ವರ್ಗಾವರ್ಗಿ, ಗ್ರಾಮಾಂತರ ಸೇವೆ ಕಡ್ಡಾಯವಾದರೆ ಇನ್ನೊಂದರಲ್ಲಿ ಇಲ್ಲ. ಇವು ಶಾಖೆಗಳಲ್ಲಿಯ ಸಿಬ್ಬಂದಿ ಸಮೂಹವನ್ನು ನಿರೂಪಿಸುವಲ್ಲಿ ನೇರ ಹೊಣೆ, ಖಾಯಂ ಅಥವಾ ಹೆಚ್ಚು ದಿನಗಳ ವರೆಗೆ ಇರುವ ಸಿಬ್ಬಂದಿಗಳಿಂದಾಗಿ ಗ್ರಾಹಕರಿಗೆ ಪರಿಚಿತ ಸೇವೆ ಲಭ್ಯ ಒಂದೆಡೆಯಾದರೆ ಇನ್ನೊಂದೆಡೆ ಅನಾಸ್ತಕರು ಇದ್ದಲ್ಲಿ ಯಾವಾಗಲೂ ಗ್ರಾಹಕರು ಅಸಂತುಷ್ಟರಾಗಿರುತ್ತಾರೆ, ಸೇವೆಯಿಂದ ವಂಚಿತರಾಗುತ್ತಾರೆ. ಪದೇಪದೇ ಬದಲಾಗುವ ಸಿಬ್ಬಂದಿಯಿಂದಾಗಿ ಹೊಂದಿಕೊಂಡಿರದ ಅಪರಿಚಿತರಿಂದ ಗ್ರಾಹಕರು ತಡಕಾಡುವಂತಾಗುವುದು. ಗ್ರಾಹಕ—ಸಿಬ್ಬಂದಿಗಳ ಮಧ್ಯೆ ಬಾಂಧವ್ಯ ಬೆಳೆಯದು ಶಾಖೆಗಳಲ್ಲಿನ ಸಿಬ್ಬಂದಿಯನ್ನು ಭಾಗಶಃ ಕ್ರಮವಾಗಿ ವರ್ಗ ಮಾಡಬೇಕು. ಯಾವ ಕಾರಣಕ್ಕೂ ಒಂದೇ ಬಾರಿಗೆ ಹೆಚ್ಚಿನವರನ್ನು ಬದಲಿಸಬಾರದು. ಆದರೆ ಎಲ್ಲರನ್ನೂ ಬದಲಾಯಿಸಬೇಕು. ಸಂಭವನೀಯ ಮೋಸ ಪ್ರಕರಣಗಳಲ್ಲಿ ಸಿಬ್ಬಂದಿ ಭಾಗವಹಿಸುವ ಸಾಧ್ಯತೆ ಕಡಿಮೆಯಾಗುವುದು. ವರ್ಗಾವರ್ಗಿ ನಿಯಮ ಎಲ್ಲ ಬ್ಯಾಂಕುಗಳಲ್ಲಿ ಸಮನಾಗಿ ಅನ್ವಯವಾಗಲಿ.

ಒಂದೂರಿಂದ ಇನ್ನೊಂದೂರಿಗೆ ಠೇವಣಿ ಬದಲಾಯಿಸಬೇಕಾದರೆ ಸರ್ಕಾರಿ ಬ್ಯಾಂಕುಗಳೆಂದು ಒಂದರಿಂದ ಇನ್ನೊಂದಕ್ಕೆ ಹೋಗುವಂತಿಲ್ಲ. ಹೋದರೆ ಅವಧಿಪೂರ್ವ ಮುರಿತವೆಂದು ಬಡ್ಡಿ ಕಳೆದುಕೊಳ್ಳಬೇಕು. ಅನಿವಾರ್ಯ ಸಂದರ್ಭದಲ್ಲಿ ಗ್ರಾಹಕರಿಗೆ ರಕ್ಷಣೆಯಾಗಿ ದಂಡದ ಬಡ್ಡಿಯನ್ನು ಠೇವಣಿ ಪಡೆವ ಬ್ಯಾಂಕು ನೀಡಿ ಗ್ರಾಹಕನ ಹಾನಿ ತಪ್ಪಿಸಲಿ. ಒಂದರಿಂದ ಇನ್ನೊಂದಕ್ಕೆ ಅಂಚೆ ರವಾನೆ, ಡ್ರಾಫ್ಟ್, ತಂತಿ ರವಾನೆ ಸಲ್ಲದು. ಈ ಅಗತ್ಯಗಳಿಗೆ ಒಂದು ಬ್ಯಾಂಕ್ ಇನ್ನೊಂದು ಬ್ಯಾಂಕಿಗೆ ಕಳಿಸಬೇಕಾಗುತ್ತದೆ. ಎಲ್ಲವೂ ಸರ್ಕಾರಿ ಬ್ಯಾಂಕುಗಳಾದರೂ ಅಂತರ ಬ್ಯಾಂಕ್ ವ್ಯವಹಾರ ನಡೆಯದಾದಾಗ ಗ್ರಾಮಾಂತರ ಪ್ರದೇಶಗಳಲ್ಲಿ ಗ್ರಾಹಕರು ಊರಿಂದ ಊರಿಗೆ ಅಲೆಯಬೇಕಾಗಿ ಬರುತ್ತದೆ. ಜಂಟಿ ವೇದಿಕೆಗಳನ್ನು ಕೆಲವು ಸೀಮಿತ ವ್ಯವಸ್ಥೆಗಳಿಗೆ ಮಾಡಿಕೊಂಡಿದ್ದು ಇವುಗಳ ಸೌಲಭ್ಯವನ್ನು ಉಪಯೋಗಿಸಿಕೊಂಡು ಗ್ರಾಹಕರ ಪರದಾಟ ನಿಲ್ಲಿಸಬೇಕು. ಸ್ಟೇಟ್ ಬ್ಯಾಂಕುಗಳು ಒಟ್ಟಾರೆ ಈ ವಿಚಾರದಲ್ಲಿ ಒಂದೇ ಬ್ಯಾಂಕಿನಂತೆ ಗ್ರಾಹಕರಿಗೆ ಸಹಕಾರಿಯಾಗಿವೆ. ಅಂತೆಯೇ ಇತರ ಸರ್ಕಾರಿ ಬ್ಯಾಂಕುಗಳೂ ಮಾಡಬೇಕು.

ತಮ್ಮದೇ ವಿಧವಿಧವಾದ ಹೆಸರುಗಳನ್ನು ಬ್ಯಾಂಕುಗಳು ಠೇವಣಿ ಯೋಜನೆಗಳಿಗೆ ಇಡುವುದು ವಾಡಿಕೆ, ಆದರೆ ಮೂಲ ರೀತಿ–ರಿವಾಜುಗಳು ಒಂದೇ. ಅರಿಯದ ಗ್ರಾಹಕ ಗೊಂದಲಗೊಳ್ಳುತ್ತಾನೆ. ಒಂದು ಬ್ಯಾಂಕಿಗೆ ಬಂದು ಇನ್ನೊಂದು ಬ್ಯಾಂಕಿನ ಯೋಜನೆಯನ್ನು ಹೋಲಿಸುವಲ್ಲಿ ಕಷ್ಟಕ್ಕೊಳಗಾಗುತ್ತಾನೆ. ಅದೇಕೆ ಚಿತ್ರ-ವಿಚಿತ್ರ ಹೆಸರುಗಳು ? ಅರ್ಥವಾಗದ ನಾಮಗಳು ? ಎಲ್ಲ ಬ್ಯಾಂಕುಗಳೂ ಒಂದೇ ಹೆಸರುಗಳನ್ನು ತಮ್ಮ ಯೋಜನೆಗಳಿಗಿಡಲಿ, ಎಲ್ಲ ಒಂದೇ ಎಂಬ ನಿಜ ಗ್ರಾಹಕರಿಗೆ ತಿಳಿಯಲಿ.

ಸಾಲಗಳಲ್ಲಿಯಂತೂ ಬ್ಯಾಂಕುಗಳ ನಿರ್ವಹಣೆ ವಿಚಿತ್ರ. ಒಂದು ಬ್ಯಾಂಕು ಒಂದು ಊರಲ್ಲಿ ತನ್ನದೇ ಆದ್ಯತೆ ಮೇಲೆ ಕೆಲವು ಆಯ್ದ ಕ್ಷೇತ್ರಗಳಿಗೆ ಮಾತ್ರ ಸಾಲ ನೀಡುತ್ತದೆ. ಆ ಊರಿನ ಇತರ ಶಾಖೆಗಳ ಗ್ರಾಹಕರು ಆ ಕ್ಷೇತ್ರ ಸಾಲಕ್ಕೆ ಇಲ್ಲಿಗೇ ಬರಬೇಕು. ಆತ ಎಷ್ಟೇ ಹಳೆಯ ಗೌರವಾನ್ವಿತ ಗ್ರಾಹಕನಾಗಿದ್ದರೂ ಇಲ್ಲಿ ಅಪರಿಚಿತನಾಗುತ್ತಾನೆ. ಇನ್ನು ಒಂದು ಬ್ಯಾಂಕಿನಲ್ಲಿ ಸಾಲ ತೆಗೆದುಕೊಳ್ಳಲು ಒಬ್ಬ ಅನರ್ಹ, ಅಯೋಗ್ಯನೆನಿಸಿದರೂ ಆತ ಇನ್ನೊಂದರಲ್ಲಿ ಸಾಲ ತೆಗೆದುಕೊಳ್ಳಲು ಸಫಲನಾಗುವುದು ಒಂದು ವಿಪರ್ಯಾಸ. ಸಾಲ ತೆಗೆದುಕೊಳ್ಳಲು ಮಂಜೂರಿಗೆ ವಶೀಲಿ, ಒತ್ತಡ ಮುಂತಾದುವು ಗಮನಾರ್ಹ ಪಾತ್ರ ವಹಿಸುವುದಲ್ಲದೆ ಸಾಲ ಮಂಜೂರಾತಿಯಲ್ಲಿ ಬ್ಯಾಂಕುಗಳು ಬೇರೆಬೇರೆ ಅಳತೆಗೋಲನ್ನು ಹೊಂದಿರುತ್ತವೆ. ಒಬ್ಬ ಒಂದು ಬ್ಯಾಂಕಿನೊಂದಿಗೆ ಬಹಳ ವರ್ಷಗಳಿಂದ

ಸಂಪರ್ಕ ಪೊಂದಿ ಉತ್ತಮ ಠೇವಣಿದಾರನಾಗಿದ್ದರೂ ಬೇಕಾದ ಸಾಲಕ್ಕೆ ಬೇರೊಂದು ಬ್ಯಾಂಕಿಗೆ ಹೋಗಬೇಕಾಗಿ ಬರುತ್ತದೆ. ಆಗ ಠೇವಣಿದಾರ, ಹಳೆಯ ಗ್ರಾಹಕ ನೊಂದುಕೊಳ್ಳಬೇಕಾಗುತ್ತದೆ. ಸಾಲದ ನೀತಿ, ಅರ್ಹತೆಯ ಅಳತೆಗೋಲುಗಳ ವಿಚಾರದಲ್ಲಿ ಬ್ಯಾಂಕುಗಳಲ್ಲಿ ಭಿನ್ನತೆ ಏಕೆ ?

ಠೇವಣಿಯ ಪರಿಸ್ಥಿತಿಯ ಮೇಲೆ ಆಗಾಗ ಕೆಲವು ಬ್ಯಾಂಕುಗಳು ಸಾಲ ಬಿಗಿತವನ್ನು ಜಾರಿ ಮಾಡುತ್ತವೆ. ಹೊಸ ಸಾಲವಿರಲಿ, ಇರುವ ಮುಂಗಡಗಳನ್ನೂ ಕಡಿತಗೊಳಿಸುತ್ತವೆ. ಒಂದೇ ಊರಿನಲ್ಲಿ ಇದು ಒಂದು ಬ್ಯಾಂಕಿನಲ್ಲಿ ಜಾರಿಗೆ ಬಂದು ಇನ್ನೊಂದರಲ್ಲಿ ಬಾರದಿರುವುದೂ ಇದೆ. ಇದು ಆಯಾ ಬ್ಯಾಂಕುಗಳಿಗೆ ಸೀಮಿತ. ಆಗ ಒಂದೇ ಊರಿನ ವಿವಿಧ ಬ್ಯಾಂಕುಗಳ ಗ್ರಾಹಕರಿಗೆ ಮುಂಗಡ ಲಭ್ಯತೆಯಲ್ಲಿ ವ್ಯತ್ಯಯವಾದಾಗ ಏಕ ಕ್ಷೇತ್ರದಲ್ಲಿ ಪೈಪೋಟಿ ಎದುರಿಸಬೇಕಾದಾಗ ಒಬ್ಬ ಗ್ರಾಹಕ ತೊಂದರೆ ಅನುಭವಿಸುತ್ತಾನೆ. ಬ್ಯಾಂಕುಗಳು ಏನೇ ತಾಂತ್ರಿಕ ಕಾರಣಗಳನ್ನು ನೀಡಿದರೂ ಬಿಗಿತ ಅಥವಾ ಸಡಿಲಿಕೆಯಲ್ಲಿ ಬ್ಯಾಂಕುಗಳಲ್ಲಿ ಸಾಮ್ಯವಿರಬೇಕು.

ಖಾತೆದಾರ ತೀರಿಕೊಂಡಾಗ ನಾಮನಿರ್ದೇಶನವಿಲ್ಲದ ಖಾತೆಯ ಹಕ್ಕುಬಾಧ್ಯತೆ ನಿರ್ಣಯಗಳಲ್ಲಿ ಒಂದೇ ಬ್ಯಾಂಕಿನ ಶಾಖೆಯಿಂದ ಶಾಖೆಗೆ ವ್ಯವಸ್ಥಾಪಕರ ಅಧಿಕಾರ ಬೇರೆ ಬೇರೆ ಇದ್ದರೆ ಇದು ಬ್ಯಾಂಕಿನಿಂದ ಬ್ಯಾಂಕಿಗೆ ಕಾನೂನುಗಳೇ ಬೇರೆ ಬೇರೆ. ಇದೇಕೆ ? ಕೆಲವೊಮ್ಮೆ ಗ್ರಾಹಕರಿಗೆ ಅನಾವಶ್ಯಕ ಅಲೆದಾಟ, ಬೇರೆ–ಬೇರೆ ಬ್ಯಾಂಕುಗಳಲ್ಲಿಯ ನಿರ್ಣಯದ ತೊಡಕನ್ನು ನಿವಾರಿಸಬೇಕು.

ಗ್ರಾಹಕನಿಂದಾಗಿ ಬ್ಯಾಂಕು. ಹಾಗಾಗಿ ಅವನಿಗಾಗಿಯೇ ಬ್ಯಾಂಕು ಇರಬೇಕು. ಇದನ್ನು ಈಡೇರಿಸಲು, ನಿಯಂತ್ರಣ ಹೊಂದಲು ಸರ್ಕಾರ ರಾಷ್ಟ್ರೀಕರಣದಿಂದ ಸಾಧಿಸಹೊರಟಿದೆ. ಸರ್ಕಾರದ, ರಿಸರ್ವ್ ಬ್ಯಾಂಕಿನ ಕಾನೂನುಗಳಡಿ ಈ ಎಲ್ಲ ಬ್ಯಾಂಕುಗಳ ನಿಯಂತ್ರಣ ನಡೆದಿರುವಾಗ ತಾರತಮ್ಯಗಳನ್ನು ನೀಗಿಸಿ ಏಕರೂಪತೆ ನಿಧಾನವಾಗಿ ಯಾದರೂ ಸಾಧಿಸಬೇಕು. ಸರ್ಕಾರದ ಉದ್ದೇಶ ಈಡೇರುವುದರೊಂದಿಗೆ ಗ್ರಾಹಕನಿಗೂ ಹಿತ, ಸಾರ್ವಜನಿಕ ಕ್ಷೇಮ ಕೂಡ. ಗ್ರಾಹಕ ಸೇವೆ, ನಿಯಮಗಳ ಆಚರಣೆಗಳಲ್ಲಿ ಭಿನ್ನತೆ ಇಲ್ಲದಂತೆ ಬ್ಯಾಂಕುಗಳು ತಮ್ಮ ಸೇವೆ, ಹೆಚ್ಚಿನ ವ್ಯವಹಾರಗಳಿಂದ ಒಂದಕ್ಕೊಂದು ಪೈಪೋಟಿ ಮಾಡಬೇಕು. ತಮ್ಮವೇ ಆದ ತಾಂತ್ರಿಕ, ತಾರ್ಕಿಕ ಕಾರಣಗಳಿಂದ ಗ್ರಾಹಕರ ಬೇಡಿಕೆಗಳನ್ನು ಅಲ್ಲಗಳೆಯಬಾರದು. ಬ್ಯಾಂಕುಗಳು ಗ್ರಾಹಕನ ಬಗ್ಗೆ ವಿಚಾರ ಮಾಡಬೇಕು. ★


ಬ್ಯಾಂಕಿಂಗ್ ಪ್ರಪಂಚ

(ತ್ರೈಮಾಸಿಕ)

ವಾರ್ಷಿಕ ಚಂದಾ : ರೂ 15

ಆಜೀವ ಚಂದಾ : ರೂ 150


# ಪ್ರಶ್ನೋತ್ತರ

**ಬ್ಯಾಂಕಿಂಗ್ ಮತ್ತು ಅದಕ್ಕೆ ಸಂಬಂಧಿಸಿದ ಕ್ಷೇತ್ರಗಳನ್ನು ಕುರಿತಂತೆ ವಾಚಕರ ಪ್ರಶ್ನೆಗಳಿಗೆ ಈ ವಿಭಾಗದಲ್ಲಿ ಉತ್ತರ ನೀಡಲಾಗುತ್ತದೆ.**


## ರಾಜಾರಾಂ ಹೆಗಡೆ

**ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು**


### ಪ್ರಶ್ನೆ

ಬ್ಯಾಂಕಿಂಗ್ ಕಾನೂನುಗಳ (ತಿದ್ದುಪಡಿ) ಅಧಿನಿಯಮ 1983 (ಪ್ರಕರಣ 452, ಬ್ಯಾಂಕಿಂಗ್ ವಿನಿಯಮನ ಅಧಿನಿಯಮ) ಇದರ ಅನ್ವಯ ಠೇವಣಿ ಇತ್ಯಾದಿ ಖಾತೆಗಳಲ್ಲಿ ನಾಮನಿರ್ದೇಶನ (Nomination) ಮಾಡಬಹುದಷ್ಟೆ. ಕಾನೂನಿನ ದೃಷ್ಟಿಯಲ್ಲಿ ನಾಮಿತ/ನಾಮಿತಿ (Nominee)ಯ ಸ್ಥಾನವೇನು ?

### ಉತ್ತರ

ಬ್ಯಾಂಕಿಂಗ್ ಕಾನೂನುಗಳ (ತಿದ್ದುಪಡಿ) ಅಧಿನಿಯಮ 1983ರಲ್ಲಿ ಠೇವಣಿ ಖಾತೆಗಳಿಗೆ ಠೇವಣಿದಾರರು ನಾಮನಿರ್ದೇಶನ ಸೂಚಿಸುವ ಸೌಲಭ್ಯ ಒದಗಿಸಿದೆ. ಇದು 1985ರ ಮಾರ್ಚ್ 29ರಿಂದ ಜಾರಿಗೆ ಬಂದಿದೆ. ಈ ಸೌಲಭ್ಯ ಠೇವಣಿ ಖಾತೆಯಲ್ಲದೆ, ಭದ್ರ ಸುಪರ್ದು ಮತ್ತು ಭದ್ರ ಠೇವು ಕಪಾಟುಗಳಿಗೂ ಲಭ್ಯವಿದೆ. ಇದರ ಉದ್ದೇಶ ಠೇವಣಿದಾರನ/ಳ ಅಥವಾ ಠೇವಣಿದಾರರ (ಜಂಟಿ ಖಾತೆಗಳಲ್ಲಿ) ಮರಣಾನಂತರ, ಆತನ/ಳ (ಅವರ) ಖಾತೆಗಳಲ್ಲಿನ ಜಮಾ ಹಣ ಇತ್ಯಾದಿಗಳನ್ನು ಕೊಡುವಾಗ ಉದ್ಭವಿಸುತ್ತಿದ್ದ ಜಟಿಲ ಸಮಸ್ಯೆಗಳನ್ನು ಸರಳಗೊಳಿಸುವುದಾಗಿದೆ.

ಕಾನೂನಿನ ದೃಷ್ಟಿಯಲ್ಲಿ ನಾಮಿತ/ನಾಮಿತಿಯ ಸ್ಥಾನವನ್ನು ತಿಳಿಯುವುದು ತುಂಬ ಅವಶ್ಯ. 1983ರ ಬ್ಯಾಂಕಿಂಗ್ ಕಾನೂನುಗಳ ಅಧಿನಿಯಮದಲ್ಲಿ ಉಪಯೋಗಿಸಿರುವ ಪದಪ್ರಯೋಗಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಅವನ/ಳ ಸ್ಥಾನ, 1938ರ ವಿಮಾ ಅಧಿನಿಯಮದ ಪ್ರಕರಣ 39ರಲ್ಲಿ ಉಲ್ಲೇಖಿಸಲ್ಪಟ್ಟಿರುವ ನಾಮಿತ/ನಾಮಿತಿಯ ಸ್ಥಾನಕ್ಕಿಂತ ಭಿನ್ನವಾಗಿ ಕಂಡುಬರುವುದಿಲ್ಲ.ನಾಮಿತ/ನಾಮಿತಿ/ನಾಮಿನಿ ಕೇವಲ ಜಮಾ ಹಣ ಇತ್ಯಾದಿಗಳನ್ನು ತೆಗೆದುಕೊಳ್ಳುವ ಅಭಿಕರ್ತ ಮಾತ್ರವೇ ಹೊರತು, ಆತ/ಕೆ ಅಂತಹ ಸ್ವತ್ತಿಗೆ (ಹಣ ಇತ್ಯಾದಿ) ಒಡೆಯನಾ/ಳಾಗುವುದಿಲ್ಲ.ಜೀವವಿಮಾ ಅಧಿನಿಯಮ 1938ರಲ್ಲಿನ ಪ್ರಕರಣ 39ನ್ನು ವ್ಯಾಖ್ಯಾನಿಸುತ್ತ ಸರ್ವೋಚ್ಚ ನ್ಯಾಯಾಲಯ ಸರಬತಿದೇವಿ ವಿರುದ್ಧ ಉಷಾದೇವಿ [(1984) I ಎಸ್.ಸಿ.ಸಿ. 424)]ಯ ತನ್ನ ತೀರ್ಪಿನಲ್ಲಿ ಈ ರೀತಿ ಹೇಳಿದೆ:

'ಕೇವಲ ನಾಮನಿರ್ದೇಶನ ಮಾಡಿದಾಕ್ಷಣ ಅಂತಹ ನಾಮಿತ/ನಾಮಿತಿ/ನಾಮಿನಿಗೆ ಅಂತಹ ಹಣದ ಮೇಲೆ ಒಡೆತನದ ಹಕ್ಕುಗಳನ್ನು ಕಲ್ಪಿಸಿದ್ದಾರೆಂದು ಭಾವಿಸಲಿಕ್ಕಾಗದು. ಇಂತಹ ಸೌಲಭ್ಯ ಕೇವಲ ಹಣವನ್ನು ತೆಗೆದುಕೊಳ್ಳಲು ಅಧಿಕಾರವುಳ್ಳ "ಕೈಗಳನ್ನಷ್ಟೆ" ಸೂಚಿಸುವುದಾಗಿದ್ದು. ಅದರಂತೆ ಹಣ ಪಾವತಿ ಮಾಡಿದಾಗ, ವಿಮಾ ನಿಗಮ ತನ್ನ ಹೊಣೆಗಾರಿಕೆಯಿಂದ ವಿಮುಕ್ತವಾಗುತ್ತದೆ. ಪಾಲಿಸಿದಾರನ ಮರಣಾನಂತರ, ಪಾಲಿಸಿಯ ಹಣ ಕೂಡ ಆತನ ಆಸ್ತಿಸಂಪದದ ಭಾಗವಾಗುವುದರಿಂದ, ಉತ್ತರಾಧಿಕಾರ ಕಾನೂನುಗಳು ಅದಕ್ಕೂ ಅನ್ವಯವಾಗುತ್ತವೆ. ಈ ಸೌಲಭ್ಯ ಮೂರನೆಯ ತೆರನಾದ ವಾರಸುದಾರಿಕೆಯೆಂದು ಪರಿಗಣಿಸಿ, ವಹಿವಾಟು ನಡೆಸಲಾಗುವಂತಹ ಉದ್ದೇಶವನ್ನು ಹೊಂದಿಲ್ಲ. ಅಂತಹ ಉತ್ತರಾಧಿಕಾರವು ಮರಣಶಾಸನಕ್ಕೆ ಸಂಬಂಧಿಸಿದ್ದು ಅಥವಾ ಮರಣಶಾಸನವಿಲ್ಲದ್ದು ಆಗಿರಬಹುದು. ವಿಮಾದಾರನ/ಳ ವಿಧಿಸಮ್ಮತ ವಾರಸುದಾರರು ನಾಮಿತ/ನಾಮಿತಿ/ನಾಮಿನಿ ತೆಗೆದುಕೊಂಡಿರುವ ಹಣಕ್ಕೆ ಹಕ್ಕುಸಾಧನೆ (claim) ಮಾಡಬಹುದು. ಪ್ರಕರಣ 39ರಲ್ಲಿ ನಾಮಿತ/ನಾಮಿತಿ/ನಾಮಿನಿಗೆ ಹಣ 'ಪಾವತಿ' ಮಾಡಬೇಕೆನ್ನುವುದರ ಅರ್ಥ, ಹಣ ಆತನಿಗೆ 'ಸೇರುತ್ತದೆ' ಎನ್ನುವುದಲ್ಲ.'

ಇದರಂತೆಯೇ 1983ರ ಬ್ಯಾಂಕಿಂಗ್ ಕಾನೂನುಗಳ (ತಿದ್ದುಪಡಿ) ಅಧಿನಿಯಮದಲ್ಲಿನ ನಾಮಿತ/ನಾಮಿತಿಯ ಸ್ಥಾನಕೂಡ. ಇಲ್ಲಿಯೂ ಆತ/ಕೆ ಕೇವಲ ಹಣ ಇತ್ಯಾದಿಗಳನ್ನು ಸ್ವೀಕರಿಸುವ ಅಭಿಕರ್ತನೇ/ಳೇ ಹೊರತು ಆತನ ಅಂತಹ ಸ್ವತ್ತುಗಳಿಗೆ ಒಡೆಯನಾ/ಳಾಗುವುದಿಲ್ಲ. ನಿಜವಾದ ವಾರಸುದಾರರ ಪರವಾಗಿ ಅಂತಹ ಸ್ವತ್ತುಗಳನ್ನು ಆತ/ಕೆ ನ್ಯಾಸಧಾರಿಯಾಗಿ ಇಟ್ಟುಕೊಂಡಿರಬೇಕಾಗುತ್ತದೆ. ನಿಜವಾದ ವಾರಸುದಾರರು ಅವನಿ/ಳಿಂದ ಹಕ್ಕುಸಾಧನೆಮಾಡಬಹುದು. ಗ್ರಾಹಕನ ಆದೇಶದ ರೀತ್ಯ ಆತನ ಮರಣಾನಂತರ ನಾಮಿತ/ನಾಮಿತಿ/ನಾಮಿನಿಗೆ ಜಮಾ ಹಣ ಇತ್ಯಾದಿಗಳನ್ನು ಕೊಟ್ಟಾಗ, ಬ್ಯಾಂಕು ತನ್ನ ಹೊಣೆಗಾರಿಕೆಯಿಂದ ವಿಮುಕ್ತಗೊಳ್ಳುತ್ತದೆ.

ಭವಿಷ್ಯ ನಿಧಿ ಅಧಿನಿಯಮದಲ್ಲಿನ ನಾಮಿತ/ನಾಮಿತಿಯ ಸ್ಥಾನ, ಅಲ್ಲಿಯ ಪದಪ್ರಯೋಗಗಳನ್ನು ಗಮನಿಸಿದಾಗ, ಭಿನ್ನವಾಗಿದ್ದು ಕಂಡುಬರುತ್ತದೆ. ಅಲ್ಲಿ ಅಂತಹ ನಾಮಿತ/ನಾಮಿತಿಯಲ್ಲಿ ಪಾವತಿಯಾಗಬೇಕಾದ ಹಣ ನಿಹಿತ (Vests) ವಾಗುತ್ತದೆ.

ಇನ್ನೊಂದನ್ನು ಗಮನಿಸಿ. ಈ 1983ರ ಬ್ಯಾಂಕಿಂಗ್ ಕಾನೂನುಗಳ (ತಿದ್ದುಪಡಿ) ಅಧಿನಿಯಮದ ರೀತ್ಯ ಎರಡು ಅಥವಾ ಎರಡಕ್ಕಿಂತ ಹೆಚ್ಚಿನ ಬಾಡಿಗೆದಾರರು ಜಂಟಿಯಾಗಿ ಭದ್ರ ಠೇವು ಕಪಾಟುಗಳನ್ನು ಹೊಂದಿದ ಸಂದರ್ಭವನ್ನು ಬಿಟ್ಟು ಇನ್ನುಳಿದ ಎಲ್ಲಾ ಸಂದರ್ಭಗಳಲ್ಲಿ ಕೇವಲ ಒಬ್ಬ 'ವ್ಯಕ್ತಿ'ಯನ್ನು ಮಾತ್ರ ನಾಮಿತ/ನಾಮಿತಿ/ನಾಮಿನಿಯೆಂದು ಸೂಚಿಸಬಹುದಾಗಿದೆ. ★

# ಕಡಿಮೆ ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ವಾಯಿದಾ ವಿನಿಮಯ ಮಾರುಕಟ್ಟೆಗಳು*

**ವಿನಿಮಯ ದರ ನಷ್ಟಸಂಭಾವ್ಯತೆಯ ವಿರುದ್ಧ ರಕ್ಷೆಯನ್ನು ಒದಗಿಸಲು ಸರ್ಕಾರಿ ಸಹಾಯಧನ ನೀಡಿಕೆ ವಿಧಾನವನ್ನು ಅವಲಂಬಿಸುವ ಬದಲು ಹಣಕಾಸು ಮಾರುಕಟ್ಟೆಗಳನ್ನು ಅಭಿವೃದ್ಧಿಶೀಲ ದೇಶಗಳು ಹೆಚ್ಚು ಹೆಚ್ಚಾಗಿ ವಿಕಾಸಗೊಳಿಸುತ್ತಿವೆ.**

ಮೂಲ : ಪೀಟರ್ ಜೆ. ಕ್ವಿರ್ಕ್

ಮತ್ತು

ವಿಕ್ಟರ್ ಸ್ಸೊಫ್ಸ್

ಅನುವಾದ :

ಬ್ಯಾಂಕಿಂಗ್ ಕಮ್ಮಟಿ-೧೬

ದಾವಣಗೆರೆ

1973ರಲ್ಲಿ ಪ್ರಮುಖ ಕೈಗಾರಿಕಾ ದೇಶಗಳಲ್ಲಿ ವ್ಯಾಪಕ ಚರವಿನಿಮಯ ದರಗಳ ಆಗಮನವಾಯಿತು ಹಾಗೂ ಹಣಕಾಸು ಮಾರುಕಟ್ಟೆಗಳ ಅಂತರ ರಾಷ್ಟ್ರೀಕರಣವಾಯಿತು. ಅಂದಿನಿಂದ ಅಂತರರಾಷ್ಟ್ರೀಯ ವಹಿವಾಟುಗಳಲ್ಲಿ ವಿನಿಮಯ ನಷ್ಟ ಸಂಭಾವ್ಯತೆಯ ವಿರುದ್ಧ ರಕ್ಷಣೆಗಾಗಿ ವಿದೇಶಿ ವಿನಿಮಯದ ವಾಯಿದಾ ಮಾರುಕಟ್ಟೆಗಳು ಗಣನೀಯವಾಗಿ ವಿಕಾಸಗೊಂಡಿವೆ. ನಿಗದಿತ ವಿನಿಮಯ ದರದಲ್ಲಿ ಆಮದುದಾರರ ವಿದೇಶಿ ವಿನಿಮಯ ಬೇಡಿಕೆಯನ್ನು ರಫ್ತುದಾರರ ಬೇಡಿಕೆಗೆ ಹೊಂದಿಸುವುದರ ಮೂಲಕ ಅಥವಾ ವಿನಿಮಯ ದರಗಳಲ್ಲಿ ಉಂಟಾದ ಪ್ರತಿಕೂಲ ಪಲ್ಲಟದಿಂದಾಗಿ ಉದ್ಭವಿಸುವ ನಷ್ಟವನ್ನು ಭರಿಸಲು ಸಿದ್ಧರಿರುವ ಪ್ರತಿನಿಧಿಗಳಲ್ಲಿ ಅದನ್ನು ಹಂಚುವುದರ ಮೂಲಕ ವಾಯಿದಾ ವಿನಿಮಯ ಮಾರುಕಟ್ಟೆಗಳು ವಿದೇಶಿ ವ್ಯಾಪಾರ ಸಂಬಂಧಿ ನಷ್ಟಸಂಭಾವ್ಯತೆಯನ್ನು ಕಡಿಮೆಗೊಳಿಸುತ್ತವೆ.

ಅಂತರರಾಷ್ಟ್ರೀಯ ವಹಿವಾಟುಗಳಲ್ಲಿನ ವಿದೇಶಿ ವಿನಿಮಯ ನಷ್ಟ ಸಂಭಾವ್ಯತೆ ವಿರುದ್ಧ ವಾಯಿದಾ ರಕ್ಷೆ ಅಥವಾ ವಿಮೆ ಒದಗಿಸಲು ಮುಖ್ಯವಾಗಿ ಮೂರು ಬಗೆಯ ವ್ಯವಸ್ಥೆಗಳಿವೆ. ಅಧಿಕೃತ ಮಧ್ಯಪ್ರವೇಶನ ಸಾಧ್ಯವಿರುವ ಮಾರುಕಟ್ಟೆ ನಿರ್ಧಾರಿತ ವ್ಯವಸ್ಥೆಗಳು, ಮುಕ್ತ ಮಾರುಕಟ್ಟೆ ಪರಿಸ್ಥಿತಿಗಳ ಕಲ್ಪನೆಗಳ ಆಧಾರದ ಮೇಲೆ ವಾಯಿದಾ ದರಗಳನ್ನು ನಿರ್ಧರಿಸಲು ಪ್ರಾಧಿಕಾರಿಗಳು ಪ್ರಯತ್ನಿಸುವ ಮಾರುಕಟ್ಟೆ ದರಗಳನ್ನು ಸಮೀಪಿಸುವ ವ್ಯವಸ್ಥೆಗಳು ಮತ್ತು ಮಾರುಕಟ್ಟೆಯದಕ್ಕಿಂತ ಭಿನ್ನವಾದ ಸ್ಥಿರ ದರಗಳಲ್ಲಿ ಅಧಿಕೃತ ರಕ್ಷೆ. ಮುಖ್ಯವಾಗಿ ಕೊನೆಯ ಎರಡು ವ್ಯವಸ್ಥೆಗಳ ಅಸ್ತಿತ್ವದ ಪರಿಣಾಮವಾಗಿ ಸರ್ಕಾರಿ ಸಹಾಯಧನಗಳೇ ಪ್ರಧಾನವಾಗಿವೆ. ಇದರಿಂದಾಗಿ ಕೇಂದ್ರ ಬ್ಯಾಂಕಿನ ನಷ್ಟಗಳಿಗೂ ರಾಜ್ಯಕೋಶೀಯ ಮತ್ತು ಹಣಕಾಸಿನ ತೊಡಕುಗಳಿಗೂ ಎಡೆಯುಂಟಾಗಿದೆ. ಕೆಲವು ದೇಶಗಳಲ್ಲಿ ಈ ನಷ್ಟಗಳನ್ನು ಆಯವ್ಯಯದಲ್ಲಿ ಲೀನಗೊಳಿಸಲಾಗಿದೆ. ತರುವಾಯ ಹಣವಿಸ್ತರಣೆಯಿಂದ ಧನ ಪೋಷಣೆ ಮಾಡಲಾಗಿದೆ. ತತ್ಫಲವಾಗಿ ಹಣದುಬ್ಬರ ಉಂಟಾಗಿದೆ ಮತ್ತು ಪಾವತಿ ಶಿಲ್ಕು ದುರ್ಬಲಗೊಂಡಿದೆ. ಮತ್ತಷ್ಟು ನಷ್ಟಗಳ ನಿರೀಕ್ಷೆಯಿಂದಾಗಿ ನಾನಾ ಸಂದರ್ಭಗಳಲ್ಲಿ ಸರ್ಕಾರಗಳು ಪಾವತಿ ಶಿಲ್ಕುಗಳ ಅಸಮತೋಲಗಳನ್ನು ನಿವಾರಿಸಲು ವಿನಿಮಯ ದರಗಳ ಹೊಂದಾಣಿಕೆಗಳನ್ನು ವಿಳಂಬಗೊಳಿಸಲು ಪ್ರಚೋದಿಸಿವೆ. ಫಲವಾಗಿ ರಕ್ಷಾ ಯೋಜನೆಗಳಿಗೆ ವಿನಿಮಯ ದರ ನೀತಿಯನ್ನು ಅಧೀನಗೊಳಿಸಲಾಗಿದೆ. ಪರಿಣಾಮವಾಗಿ ಆರ್ಥಿಕ ಅಸ್ಥಿರತೆ ಹೆಚ್ಚಿದೆ. ಹೆಚ್ಚಿನ ಮಾರುಕಟ್ಟೆ ವ್ಯವಸ್ಥೆಗಳತ್ತ ಚಲಿಸುವುದರ ಮೂಲಕ ಇತರ ದೇಶಗಳಲ್ಲಿ ನಷ್ಟವನ್ನು ಕ್ರಮೇಣ ಕಡಿಮೆ ಮಾಡಲಾಗಿದೆ.

1970ರ ದಶಕದಲ್ಲಿ ಮಾರುಕಟ್ಟೆ ನಿರ್ಧಾರಿತ ವಾಯಿದಾ ಏರ್ಪಾಡುಗಳಿಲ್ಲದ ಹಲವು ಅಭಿವೃದ್ಧಿರಹಿತ ದೇಶಗಳು ಈಗ ಅವನ್ನು ಜಾರಿಗೆ ತಂದಿವೆ. ವಿದೇಶಿ ವಿನಿಮಯ ವಾಯಿದಾ ಮತ್ತು ಆಯ್ಕೆಯ ಹಕ್ಕುಗಳ ಮಾರುಕಟ್ಟೆಗಳು ಸೇರಿದಂತೆ ವಿನಿಮಯ ದರದ ನಷ್ಟಸಂಭಾವ್ಯತೆಯ ವಿರುದ್ಧ ರಕ್ಷಣೆಗಾಗಿ ಸಂಲೇಖಗಳ ಪರ್ಯಾಯವನ್ನು ಒದಗಿಸುವ ಹೊಸ ಸೌಲಭ್ಯಗಳು ಮತ್ತು ಸಂಸ್ಥೆಗಳು ಕೂಡ ರಚಿತವಾಗಿವೆ.

1980ರ ದಶಕದ ಆರಂಭದಿಂದ ಅಭಿವೃದ್ಧಿಶೀಲ ದೇಶಗಳು ಕೂಡ ಬಾಹ್ಯ ಹಣಕಾಸು ಅಸಮತೋಲವನ್ನು ಹೊಂದಿಕೊಳ್ಳುವ ಸಲುವಾಗಿ ಹೆಚ್ಚಿನ ವಿನಿಮಯದರದತ್ತ ಚಲಿಸಿವೆ [ನೋಡಿ IMF occasional paper No. 53, 1987]. ಹೆಚ್ಚು ನಮ್ಯವೂ ಮಾರುಕಟ್ಟೆ ನಿರ್ಧಾರಿತವೂ ಆದ ತತ್ಕ್ಷಣ ವಿನಿಮಯ ದರಗಳು ವಾಯಿದಾ ವಿದೇಶಿ ವಿನಿಮಯ ಮಾರುಕಟ್ಟೆ ಬೆಳವಣಿಗೆಗೆ ಮತ್ತು ವಿಕಾಸಕ್ಕೆ ಒಲಿದಿವೆ. ಅಭಿವೃದ್ಧಿಶೀಲ ಜಗತ್ತಿನಲ್ಲಿ ಕೆಲವೇ ಆದರೂ ಸಂಖ್ಯೆಯಲ್ಲಿ ಹೆಚ್ಚುತ್ತಿರುವ ವಾಯಿದಾ ವಿನಿಮಯ ಮಾರುಕಟ್ಟೆಗಳು ಈ ಜಗತ್ತಿನಲ್ಲಿ ಉಗಮಿಸಿವೆ. ಈ ಜಗತ್ತಿನಲ್ಲಿ ವಾಣಿಜ್ಯ ಬ್ಯಾಂಕು ಸ್ಪರ್ಧಾತ್ಮಕ ಪರಿಸ್ಥಿತಿಯಲ್ಲಿ ಖಾಸಗಿ ವಲಯಕ್ಕೆ ವಾಯಿದಾ ರಕ್ಷೆಯನ್ನು ನೀಡಿವೆ. ಆದಾಗ್ಯೂ, ಅಧಿಕೃತವಾಗಿ ವಾಣಿಜ್ಯ ಬ್ಯಾಂಕಿಂಗ್ ವ್ಯವಸ್ಥೆಯಾಗಲಿ, ಕೇಂದ್ರ ಬ್ಯಾಂಕ್ ಆಗಲಿ ಇತರ ಅಧಿಕೃತ ಸಂಸ್ಥೆಗಳಾಗಲಿ ಒದಗಿಸುತ್ತಿರುವ ವಾಯಿದಾ ವಿನಿಮಯ ರಕ್ಷೆಯನ್ನು ಕೆಲವೊಮ್ಮೆ ಅಧಿಕೃತವಾಗಿ ನಿಯಂತ್ರಿಸಲಾಗಿದೆ. ಸ್ಪರ್ಧಾತ್ಮಕ ಪರಿಸ್ಥಿತಿಗಳಲ್ಲಿ ಖಾಸಗಿ ವಲಯಕ್ಕೆ ವಾಣಿಜ್ಯ ಬ್ಯಾಂಕುಗಳ ಇಂತಹ ರಕ್ಷೆಯ ನೀಡಿಕೆ ಸುಮಾರು 15 ಅಭಿವೃದ್ಧಿಶೀಲ ದೇಶಗಳಿಗೆ ಈಗಲೂ ಸೀಮಿತವಾಗಿದೆ (ಕೋಷ್ಟಕ 1).

ಕೋಷ್ಟಕ 1

ವಾಯಿದಾ ರಕ್ಷೆ ಒದಗಿಸಿರುವ ಆಯ್ದ ಅಭಿವೃದ್ಧಿ ದೇಶಗಳ ವಾಣಿಜ್ಯ ಬ್ಯಾಂಕುಗಳು :

ಅನಿಯಂತ್ರಿತ ವಾಯಿದಾ ದರಗಳು : ಆರ್ಜೆಂಟೀನಾ, ಬ್ರೆಜಿಲ್, ಚಿಲಿ, ಇಂಡೋನೇಷಿಯ, ಜೋರ್ಡಾನ್, ಕೊರಿಯಾ, ಮಲೇಷಿಯಾ, ನೈಜೀರಿಯಾ, ಫಿಲಿಪೀನ್ಸ್, ಸಿಂಗಪೂರ್, ದಕ್ಷಿಣ ಆಫ್ರಿಕಾ, ಶ್ರೀಲಂಕಾ, ಥೈಲೆಂಡ್, ಸಂಯುಕ್ತ ಅರಬ್ ಎಮಿರೇಟ್ಸ್, ಉರುಗ್ವೆ ಮತ್ತು ಜಾಯಿರ್

ನಿಯಂತ್ರಿತ ವಾಯಿದಾ ದರಗಳು : ಬಾಂಗ್ಲಾದೇಶ, ಚೀನಾ ಗಣರಾಜ್ಯ, ಭಾರತ, ಕೆನ್ಯಾ, ಮಾಲ್ವ, ಪಾಕಿಸ್ತಾನ ಮತ್ತು ಜಿಂಬಾವ್ವೆ.

* *Finance and Development*, ಸೆಪ್ಟೆಂಬರ್ 1988ರ ಸಂಚಿಕೆಯಲ್ಲಿ ಪ್ರಕಟವಾದ ಲೇಖನದ ಅನುವಾದ.

ಕೋಷ್ಟಕ 2

ವಿನಿಮಯ ನಷ್ಟಸಂಭಾವತ್ಯೆಯ ವಿರುದ್ಧ ಏರ್ಪಡಿಸಲಾದ ಉಪಬಂಧದಿಂದ ಆಯ್ದ ಕೇಂದ್ರೀಯ ನಷ್ಟಗಳು

| | ಅವಧಿ | ಸಂಚಿತ ನಷ್ಟಗಳು ಸ್ಥೂಲದೇಶೀಯ ಉತ್ಪನ್ನದ ಶೇಕಡಾವಾರು |
|---|---|---|
| ಕಾಸ್ಟರಿಕ | 1981–83 | 10 |
| ಇಸ್ರೇಲ್ | 1484–85 | 3 |
| ಫಿಲಿಪೀನ್ಸ್ | 1983–85 | 4 |
| ದಕ್ಷಿಣ ಆಫ್ರಿಕ | 1981-85 | 10 |

## ಪ್ರಯೋಜನಗಳು

ಪ್ರತಿಕೂಲ ವಿನಿಮಯ ದರ ಚಲನೆಗಳಿಂದ ಉದ್ಭವಿಸುವ ನಷ್ಟಗಳ ಭಯದಿಂದ ಅಂತರ ರಾಷ್ಟ್ರೀಯ ವಹಿವಾಟುಗಳು ನಿರುತ್ತೇಜನಗೊಳ್ಳುವ ಪ್ರವೃತ್ತಿ ಉಂಟಾಗುತ್ತದೆ. ಉದಾಹರಣೆಗೆ, ರಫ್ತುದಾರನು ತನ್ನ ಸರಕುಗಳನ್ನು ರವಾನಿಸುವುದಕ್ಕೂ, ಅವುಗಳಿಗೆ ಪಾವತಿಯನ್ನು ಸ್ವೀಕರಿಸುವುದಕ್ಕೂ ನಡುವಿನ ಅವಧಿಯಲ್ಲಿ ದೇಶೀಯ ಚಲಾರ್ಥದ ಮೌಲ್ಯ ಹೆಚ್ಚಿದಲ್ಲಿ ಅವನು ರಫ್ತಿನ ಸಮಯದಲ್ಲಿ ನಿರೀಕ್ಷಿಸಿದಕ್ಕಿಂತ ಕಡಿಮೆ ದೇಶೀಯ ಚಲಾರ್ಥವನ್ನುಪಡೆಯುವುದರಿಂದ ನಷ್ಟ ಅನುಭವಿಸುತ್ತಾನೆ. ಅವನು ವಿದೇಶಿ ಚಲಾರ್ಥದಲ್ಲಿ ಪಡೆಯುವುದನ್ನು ದೇಶಿ ಚಲಾರ್ಥಕ್ಕೆ ವಿನಿಮಯವಾಗುವ ದರವನ್ನು ಬದ್ಧಗೊಳಿಸುವ ಮೂಲಕ ರಕ್ಷೆ ಪಡೆದುಕೊಳ್ಳುವುದು ಸಾಧ್ಯವಾಗಿದ್ದಲ್ಲಿ ಅವನಿಗೆ ಯಾವ ನಷ್ಟಭಯವೂ ಇರುವುದಿಲ್ಲ. ವಾಯಿದಾ ರಕ್ಷೆಯನ್ನು ಪಡೆಯುವುದರ ಮೂಲಕ, ಅಂದರೆ ಅವನು ಪಡೆಯುವುದಾಗಿ ನಿರೀಕ್ಷಿಸುವ ವಿದೇಶಿ ಚಲಾರ್ಥವನ್ನು ವಾಸ್ತವವಾಗಿ ಅದರ ಪಾವತಿ ಪಡೆಯುವುದಕ್ಕೂ ಬಹಳ ಮುಂಚೆಯೇ (ಉದಾಹರಣೆ ಮೂರು ತಿಂಗಳು) ಅವನು ಬಿಕರಿ ಮಾಡುವುದರ ಮೂಲಕ ಅಂಥ ನಷ್ಟ ಭಯದ ವಿರುದ್ಧ ರಕ್ಷೆ ಪಡೆದುಕೊಳ್ಳಬಹುದು.

ವಾಯಿದಾ ರಕ್ಷೆ ಏರ್ಪಾಡುಗಳು ಆಮದು ವೆಚ್ಚಗಳನ್ನು ತಗ್ಗಿಸುವುದರ ಮೂಲಕ ಸಹಾಯವಾಗುತ್ತವೆ. ಅಲ್ಲದೆ ಈ ಏರ್ಪಾಡುಗಳು ಹೆಚ್ಚು ಸ್ಥಿರವಾದ ಆರ್ಥಿಕ ಪರಿಸರವನ್ನು ಪೋಷಿಸುವುದರಿಂದ ಅವು ಒಂದು ದೇಶದ ಉಳಿತಾಯ ವಿನಿಯೋಜನ ವಾತಾವರಣ ಸುಧಾರಿಸುವಲ್ಲಿ ಸಹಾಯಕವಾಗಬಲ್ಲವು. ಅಲ್ಲದೆ ಪ್ರತಿಕೂಲ ವಿನಿಮಯ ದರ ಚಲನೆಗಳ ವಿರುದ್ಧ ರಕ್ಷೆ ಪಡೆಯುವುದರ ಮೂಲಕ ಒಂದು ಉದ್ಯಮ ವಿದೇಶಿ ವಿನಿಮಯದಲ್ಲಿ ಚಾಲ್ತಿ ಶಿಲ್ಕುಗಳನ್ನು ಹೆಚ್ಚಾಗಿ ಇಟ್ಟುಕೊಳ್ಳುವ ಅಗತ್ಯವನ್ನು ಕಡಿಮೆ ಮಾಡಬಲ್ಲದು. ಅಭಿವೃದ್ಧಿಶೀಲ ದೇಶಗಳಲ್ಲಿನ ಆಮದುದಾರರು ವಿನಿಮಯ ನಷ್ಟಗಳ ವಿರುದ್ಧ ರಕ್ಷಣೆ ಪಡೆದುಕೊಂಡಿದ್ದರೆ ಅವರು ಕೂಡ ವಿದೇಶದಲ್ಲಿ ಲಭ್ಯವಿರುವ ವ್ಯಾಪಕ ಹಣಕಾಸು ಸೌಲಭ್ಯಗಳನ್ನು ಬಳಸಿಕೊಳ್ಳಲು ಸಮರ್ಥರಾಗಿರಬಹುದು. ಇಲ್ಲದಿದ್ದರೆ ಅವರು ಅಂತಹ ಧನಪೋಷಣೆ ತುಂಬಾ ನಷ್ಟಸಂಭಾವ್ಯದ್ದೆಂದು ಪರಿಗಣಿಸಬಹುದು.

## ಅನುಭವ ಮತ್ತು ಸಮಸ್ಯೆಗಳು

ಮೇಲೆ ಹೇಳಿದಂತೆ, ಅಭಿವೃದ್ಧಿಶೀಲ ದೇಶಗಳಲ್ಲಿನ ವಾಯಿದಾ ರಕ್ಷೆ ಏರ್ಪಾಡುಗಳು ಪ್ರಾಧಿಕಾರಗಳಿಂದ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಒದಗಿಸಲ್ಪಟ್ಟಿರುವ ಹಾಗೂ ಅಧಿಕೃತ ಸಂಪನ್ಮೂಲಗಳಿಂದ ಬೆಂಬಲಿಸಲ್ಪಟ್ಟಿರುವ ವಿನಿಮಯ ದರ ಖಾತರಿಯನ್ನು ಸಾಮಾನ್ಯವಾಗಿ ಒಳಗೊಳ್ಳುತ್ತವೆ. ಬಹಳಷ್ಟು ಪ್ರಕರಣಗಳಲ್ಲಿ, ಈ ಖಾತರಿಯನ್ನು ಒಂದು ಶುಲ್ಕಕ್ಕೆ ಪ್ರತಿಯಾಗಿ ನೀಡಲಾಗುತ್ತಿದೆ. ಆದರೆ 1983ಕ್ಕೆ ಮುಂಚೆ ಕೋಸ್ಟರಿಕಾದಲ್ಲಿದ್ದಂತೆ ಕೆಲವೊಂದು ಪ್ರಕರಣಗಳಲ್ಲಿ ಈ ಸೇವೆಗೆ ಯಾವುದೇ ಶುಲ್ಕವಿಲ್ಲ. ಕೆಲವು ಪ್ರಕರಣಗಳಲ್ಲಿ (ಉದಾಹರಣೆಗೆ ಅರ್ಜೆಂಟೈನಾ, ಇಸ್ರೇಲ್ ಮತ್ತು 1981ಕ್ಕೆ ಮುಂಚೆ ಮಾಲ್ಟ, ಮಾರಿಷಸ್, ಮೆಕ್ಸಿಕೊ, ಮೊರಾಕೊ, ಟರ್ಕಿ ಮತ್ತು ವೆನಿಜೂವೇಲಾ) ಸರ್ಕಾರ ಅಥವಾ ಕೇಂದ್ರೀಯ ಬ್ಯಾಂಕ್ ನೇರವಾಗಿ ಖಾತರಿಗಳನ್ನು ಒದಗಿಸುತ್ತದೆ. ಆದರೆ ಇತರ ಪ್ರಕರಣಗಳಲ್ಲಿ ವಾಣಿಜ್ಯ ಬ್ಯಾಂಕಿಂಗ್ ವ್ಯವಸ್ಥೆಯು ಸಣ್ಣ ಶುಲ್ಕವೊಂದಕ್ಕೆ ಪ್ರತಿಯಾಗಿ ಪ್ರಾಧಿಕಾರಗಳ ಪರವಾಗಿ ಇವನ್ನು ನಿರ್ವಹಿಸುತ್ತದೆ (ಕೋಷ್ಟಕ 1).

ವಿನಿಮಯ ದರ ಖಾತರಿಗಳು ಆಮದುಗಳಿಗೆ ಪೂರೈಕೆದಾರರ ಉದರಿಗಳ ಮತ್ತು ರಫ್ತುದಾರರಿಗೆ ರಫ್ತು ಉದರಿಗಳ ಮರುಪಾವತಿಗಳಿಗೆ ಸಾಮಾನ್ಯವಾಗಿ ರಕ್ಷೆಯನ್ನು ಒದಗಿಸುತ್ತವೆ. ಆಮದು ಉದರಿಗಳಿಗೆ ಸಂಬಂಧಿಸಿದಂತೆ, ಪೂರೈಕೆದಾರರ ಉದರಿಗಳನ್ನು ಅರಸುವುದರ ಮೂಲಕ ಅರ್ಥವ್ಯವಸ್ಥೆಗೆ ಹೆಚ್ಚಿನ ವಿದೇಶಿ ಸಂಪನ್ಮೂಲಗಳನ್ನು ಕ್ರೋಡೀಕರಿಸಲು ವ್ಯಾಪಾರಿಗಳನ್ನು ಪ್ರೋತ್ಸಾಹಿಸುವುದು ಒಂದು ಉದ್ದೇಶವಾಗಿರುವಂತೆ ಖಾತರಿಗಳನ್ನು ರೂಪಿಸಲಾಗಿದೆ. ಇದು ಕೆಲವು ಸಾರಿ ಶುಲ್ಕಗಳಿಗೆ ಸಹಾಯಧನ ನೀಡುವುದರ ಅಥವಾ ಪ್ರಾಧಿಕಾರ ಬೆಂಬಲಿತ ಖಾತರಿಗಳಿಗೆ ಶುಲ್ಕವನ್ನು ವಿಧಿಸದೆ ಇರುವುದರ ಹಿಂದಿನ ತರ್ಕವಾಗಿರುತ್ತದೆ. ಯೋಜನಾ ವೆಚ್ಚಗಳನ್ನು ಶುಲ್ಕಗಳು ತುಂಬ ದಿದ್ದಾಗ ಆಮದುದಾರರಿಗೆ ಲಭಿಸುವ ಲಾಭಗಳನ್ನು ಕೇಂದ್ರ ಬ್ಯಾಂಕುಗಳು ಅನುಭವಿಸುವ ನಷ್ಟಗಳು ತೊಡೆದುಹಾಕುತ್ತವೆ.

ದೇಶೀಯ ಚಲಾರ್ಥಕ್ಕೆ ಮೌಲ್ಯಛೇದನಗಳ ಇತಿಹಾಸವಿದ್ದಾಗ ರಫ್ತುದಾರರು ಸಾಮಾನ್ಯವಾಗಿ ವಿನಿಮಯ ಖಾತರಿಗಳಿಗಾಗಿ ಬೇಡಿಕೆ ಸಲ್ಲಿಸುವುದಿಲ್ಲ. ಇನ್ನಷ್ಟು ಮೌಲ್ಯಛೇದನಗಳಿಂದ ದೇಶೀಯ ಚಲಾರ್ಥಗಳ ಲೆಕ್ಕದಲ್ಲಿ ತಮ್ಮ ಆದಾಯಗಳು ಹೆಚ್ಚುವುವೆಂದು ಅವರು ಸಾಮಾನ್ಯವಾಗಿ ನಿರೀಕ್ಷಿಸುತ್ತಾರೆ. ತತ್ಪರಿಣಾಮವಾಗಿ ದೇಶಿಯ ಚಲಾರ್ಥ ಸವಕಳಿ ಹೊಂದುತ್ತಿರುವ ಅವಧಿಯಲ್ಲಿ ಆಮದುದಾರರಿಗೆ ನೀಡಿದ ವಿನಿಮಯ ದರ ಖಾತರಿಗಳಿಂದ ಪ್ರಾಧಿಕಾರ ನಷ್ಟಗಳನ್ನು ಸಾಮಾನ್ಯವಾಗಿ ರಫ್ತುದಾರರಿಗೆ ನೀಡಲಾದ ಖಾತರಿಗಳಿಂದ ದೊರಕುವ ಸಂವಾದಿ ಆದಾಯಗಳು ತೊಡೆದುಹಾಕುವುದಿಲ್ಲ. ವಿನಿಮಯ ಖಾತರಿ ಯೋಜನೆಗಳನ್ನು ನಿರ್ವಹಿಸುತ್ತಿರುವ ಕೆಲವು ಕೇಂದ್ರ ಬ್ಯಾಂಕುಗಳು ಅನುಭವಿಸುತ್ತಿರುವ ಭಾರೀ ನಷ್ಟಗಳ ಅಂದಾಜುಗಳನ್ನು ಕೋಷ್ಟಕ–2 ತೋರಿಸುತ್ತದೆ.

## ಮಾರುಕಟ್ಟೆ ಸಮೀಪೀಕರಣ ಯೋಜನೆಗಳು

ವಾಯಿದಾ ಮಾರುಕಟ್ಟೆ ದರಗಳನ್ನು ನಿಯಂತ್ರಿಸುವಾಗ ಮಾರುಕಟ್ಟೆ ವ್ಯವಸ್ಥೆಯ ಕಲಾಪಕ್ಕೆ ಹತ್ತಿರ ಇರುವಂತೆ ಮಾಡಲು ಹಲವು ಅಭಿವೃದ್ಧಿಶೀಲ ದೇಶಗಳು ಯತ್ನಿಸಿವೆ. ಅಂಥ ಯೋಜನೆಗಳ ಹೆಚ್ಚು ನಾಜೂಕಿನ ಆವೃತ್ತಿಗಳನ್ನು ಮೆಕ್ಸಿಕೊದಲ್ಲಿ 1983 ರಲ್ಲೂ (FICORCA), ಫಿಲಿಪೈನ್ಸ್‌ನಲ್ಲಿ 1985 ರಲ್ಲೂ ಜಾರಿಗೆ ತರಲಾಯಿತು. ಸಂಸ್ಥೆಗಳ ಸಾಲಗಳ ಪುನರ್ನಿಗದೀಕರಣದ ಸಮಯದಲ್ಲಿ ಬಾಕಿಯಿದ್ದ ಋಣ ಸೇವೆಗೆ ಎರಡೂ ಯೋಜನೆಗಳು ಸೀಮಿತವಾಗಿದ್ದವು. ಪುನರ್ನಿಗದೀಕರಣದ ಅವಧಿಗೆ ಅನುಗುಣವಾಗಿ ದೀರ್ಘ ಅವಧಿಗಳಿಗೆ [ಮೆಕ್ಸಿಕೊದಲ್ಲಿ 8 ವರ್ಷಗಳವರೆಗೂ ಫಿಲಿಪೈನ್ಸ್‌ನಲ್ಲಿ 10 ವರ್ಷಗಳ ವರೆಗೂ] ಈ ಯೋಜನೆಗಳು ರಕ್ಷೆಯನ್ನು ಒದಗಿಸಿದವು. ಇಂಥ ದೀರ್ಘಾವಧಿಯ ರಕ್ಷೆ ಕೈಗಾರಿಕಾ ದೇಶಗಳಲ್ಲಿ ಕೂಡ ವ್ಯಾಪಕವಾಗಿ ಲಭ್ಯವಿಲ್ಲ.

ವಾಯಿದಾ ರಕ್ಷೆಯ ಮೇಲೆ ಲೆಕ್ಕ ಹಾಕಲಾದ ಅಧಿಮೌಲ್ಯವನ್ನು ನಿರ್ಧರಿಸಲು ಎರಡೂ ಯೋಜನೆಗಳು ರಕ್ಷಿತ ಬಡ್ಡಿ ಸಾಮ್ಯ ಶರತ್ತನ್ನು ಮತ್ತು ಬಡ್ಡಿದರಗಳಿಗೆ ಪ್ರಕ್ಷೇಪಿಸಲಾದ ಹಣದುಬ್ಬರ ದರಗಳ ಮೂಲಕ ಕೂಡಿಕೆಗಳನ್ನು ಬಳಸಿದವು. ರಾಜಕೀಯ ನಷ್ಟಸಂಭಾವ್ಯತೆ ಮತ್ತು ವಾಸ್ತವಿಕ ಅಥವಾ ಭವ ಉದರಿ ಅಥವಾ ವಿನಿಮಯ ನಿಯಂತ್ರಣಗಳು ಇಲ್ಲದಿರುವಾಗ ವಿವಿಧ ಚಲಾರ್ಥಗಳಲ್ಲಿ ಸೂಚಿಸಲಾದ ಒಂದೇ ಪಕ್ವತಾ ದಿನಾಂಕ ಮತ್ತ ದ್ರವತ್ವವುಳ್ಳ ವಿತ್ತೀಯ ಆಸ್ತಿಗಳ ನಡುವಣ ಬಡ್ಡಿ ಭಿನ್ನಕವು ಚಲಾರ್ಥಗಳ ನಡುವಣ ವಿನಿಮಯ ಹೊಂದಾಣಿಕೆಯ ನಿರೀಕ್ಷಿತ ದರಕ್ಕೆ ಸಮನಾಗಿರುತ್ತದೆ ಎಂಬುದಾಗಿ ರಕ್ಷಿತ ಬಡ್ಡಿ ಸಾಮ್ಯ ಷರತ್ತು ಹೇಳುತ್ತದೆ. ಹಣದುಬ್ಬರದ ನಿರೀಕ್ಷಿತ ದರಗಳು ಆಯಾ ಚಲಾರ್ಥಗಳಲ್ಲಿ ಸೂಚಿತವಾದ ಆಸ್ತಿಗಳ ಮೇಲಣ ನಾಮಕ ಬಡ್ಡಿದರಗಳಲ್ಲಿ ಬಿಂಬಿತವಾಗಿರುವ ಮಟ್ಟಿಗೆ ಬಡ್ಡಿ ಭಿನ್ನಕವನ್ನು ಪ್ರತಿಯಾಗಿ ನಿರ್ಧರಿಸುತ್ತದೆ.

ದೇಶೀಯ ಮತ್ತು ವಿದೇಶೀಯ ಹಣಕಾಸು ಮಾರುಕಟ್ಟೆಗಳೆರಡೂ ನಿಯಂತ್ರಣಗಳಿಂದಲೂ, ತೆರಿಗೆಗಳು ಅಥವಾ ಸಹಾಯಧನಗಳಿಂದಲೂ ಮುಕ್ತವಾಗಿದ್ದಾಗ ಮಾತ್ರವೇ ಆರೆ ಮಾರುಕಟ್ಟೆ ಅಭಿಗಮನ ಅನ್ವಯವಾಗುತ್ತದೆ ಎಂಬುದೇ ಇದರ ಮೂಲಭೂತ ತೊಂದರೆ. ಏನೇ ಇರಲಿ, ಶೂನ್ಯಅಧಿಮೌಲ್ಯ ಅಥವಾ ಯಾದೃಚ್ಛಿಕವಾಗಿ ನಿಗದಿಸುವ ಅಧಿಮೌಲ್ಯಗಳಲ್ಲಿ ವಾಯಿದಾ ರಕ್ಷೆಯನ್ನು ಒದಗಿಸುವ ಸರಳ ವ್ಯವಸ್ಥೆಗಿಂತ ಸುಧಾರಿತವಾದ ವ್ಯವಸ್ಥೆಯೊಂದನ್ನು ಈ ಬಗೆಯ ಮಾರುಕಟ್ಟೆ ಸಮೀಪೀಕರಣ ಯೋಜನೆ ಪ್ರತಿನಿಧಿಸುತ್ತದೆ. ಆದಾಗ್ಯೂ ದೇಶೀಯ ಬಡ್ಡಿದರಗಳನ್ನು ಕೃತಕವಾಗಿ ಕೆಳಮಟ್ಟದಲ್ಲಿಟ್ಟಿದ್ದು ಅಧಿಮೌಲ್ಯವನ್ನು ಅಂತರ ರಾಷ್ಟ್ರೀಯ ಬಡ್ಡಿ ಭಿನ್ನಕಗಳ ಆಧಾರದ ಮೇಲೆ ನಿಗದಿಗೊಳಿಸುವ ಸಂದರ್ಭಗಳಲ್ಲಿ ಅಂತಿಮವಾಗಿ ನಷ್ಟಗಳು ಸಂಭವಿಸುತ್ತವೆ. ಏಕೆಂದರೆ ಬಡ್ಡಿ ಭಿನ್ನಕಗಳಿಂದ ಸೂಚಿತವಾಗುವ ಹೊಂದಾಣಿಕೆಗಳಿಗಿಂತ ಹೆಚ್ಚಿನ ವಿನಿಮಯದರ ಹೊಂದಾಣಿಕೆಗಳು ಹಣಕಾಸು ಅಸಮತೋಲದ ಪುನಃಸ್ಥಾಪನೆಗೆ ಅಗತ್ಯವಾಗುತ್ತವೆ. ಸಮಾಂತರ ವಿದೇಶಿ ವಿನಿಮಯದ ಅಥವಾ ದೇಶಿಯ ಹಣಕಾಸು ಮಾರುಕಟ್ಟೆಯ ಅಧಿಮೌಲ್ಯ ಅಥವಾ ವಟ್ಟಗಳ ಮಿತಿಯನ್ನು ಅಂತಹ ಅಸಮತೋಲವನ್ನು ಸೂಚಿಸಲು ಬಳಸಬಹುದು.

ವಾಯಿದಾ ಅಧಿಮೌಲ್ಯವನ್ನು ನಿರ್ಧರಿಸಲು ಅಥವಾ ರಕ್ಷಿತ ಬಡ್ಡಿ ಸಾಮ್ಯವನ್ನು ಅನ್ವಯಿಸುತ್ತ ಚಲಿಸುವುದರ ಮೂಲಕ ಅಥವಾ ಸಹಾಯಧನ ಮತ್ತು ಇತರ ವಿರೂಪಣಗಳನ್ನು ನಿವಾರಿಸುವುದರ ಮೂಲಕ ಸರ್ಕಾರಗಳು ನಷ್ಟಗಳ ಪರಿಣಾಮವಾಗಿ ತಮ್ಮ ವಾಯಿದಾ ರಕ್ಷಾ ಯೋಜನೆಗಳನ್ನು ಹೊಂದಿಸಿಕೊಂಡಿವೆ. ಉದಾಹರಣೆಗೆ 1981–83 ರಲ್ಲಿ ಆಗಾಧ - ನಷ್ಟಗಳಿಗೆ ಎಡೆಯುಂಟುಮಾಡಿದ ಯೋಜನೆಯನ್ನು ಕೋಸ್ಟಾರಿಕಾ ಹಿಂತೆಗೆದುಕೊಂಡಿದೆ. 1986ರಲ್ಲಿ ಇಂಡೋನೇಷಿಯಾ ತನ್ನ ಕೇಂದ್ರ ಬ್ಯಾಂಕಿನ ವಾಯಿದಾ ರಕ್ಷೆಯನ್ನು ಕುರಿತ ಉಪಬಂಧವನ್ನು ಜಾರಿಗೆ ತಂದು, ಬಡ್ಡಿದರ ಭಿನ್ನಕಗಳ ಹೆಚ್ಚು ನಿಕಟತರ ಸಮೀಪೀಕರಣದೆಡೆಗೆ ಸಾಗಿತು ಮತ್ತು ಇತ್ತೀಚೆಗೆ ವಾಣಿಜ್ಯ ಬ್ಯಾಂಕುಗಳ ನಡುವೆ ಮುಕ್ತ ಮಾರುಕಟ್ಟೆಸ್ಪರ್ಧೆಯತ್ತ ಸಾಗಿತು. ವರ್ಧಿತ ಮೌಲ್ಯದ ಶೇಕಡಾ ಪ್ರಮಾಣವೊಂದಕ್ಕೆ ಸಹಾಯಧನಗಳನ್ನು ಸೀಮಿತಗೊಳಿಸುವುದರ ಮೂಲಕ ಮತ್ತು ಸ್ವಯಂ ಧನಪೋಷಣೆಗೆ ಸ್ಥಿತ್ಯಂತರಗೊಳ್ಳುವುದನ್ನು ತಾತ್ತ್ವಿಕವಾಗಿ ಅಳವಡಿಸಿಕೊಳ್ಳುವುದರ ಮೂಲಕ ತನ್ನ ರಫ್ತು ವಿಮಾ ಯೋಜನೆಯಿಂದ ಉದ್ಭವಿಸಿದ ನಷ್ಟಗಳಿಗೆ ಇಸ್ರೇಲ್ ಪ್ರತಿಕ್ರಿಯಿಸಿತು. ಅಧಿಕೃತ ರಕ್ಷೆಯ ಶುಲ್ಕಗಳನ್ನು ಪಾಕಿಸ್ತಾನದಲ್ಲಿ ಈಚೆಗೆ ಏರಿಸಲಾಗಿದೆ.

## ವಾಯಿದಾ ಮಾರುಕಟ್ಟೆ ಬಗೆಗಳು

ಈಚಿನ ವರ್ಷಗಳಲ್ಲಿ ಸುಮಾರು 17 ಅಭಿವೃದ್ಧಿಶೀಲ ದೇಶಗಳು ತಮ್ಮ ಚಲಾರ್ಥಗಳನ್ನು ಚಲಿಸಲು ಬಿಟ್ಟಿರುವುವಾದರೂ ಅವುಗಳ ಪೈಕಿ ಕೆಲವುಗಳಲ್ಲಿ ಮಾತ್ರ ಚೆನ್ನಾಗಿ ವಿಕಾಸಗೊಂಡ ವಾಯಿದಾ ವಿನಿಮಯ ಮಾರುಕಟ್ಟೆ ಇದೆ. ಆದಾಗ್ಯೂ ಹೆಚ್ಚಿನ ನಮ್ಯತೆಯ ತಕ್ಷಣ ವಿನಿಮಯ ಏರ್ಪಾಡುಗಳನ್ನು ನಿರ್ವಹಿಸುತ್ತಿರುವ ಇತರ ಹಲವು ದೇಶಗಳಲ್ಲಿ ಮಾರುಕಟ್ಟೆ ನಿರ್ಧಾರಿತ ವಾಯಿದಾ ದರಗಳು ಮುಖ್ಯವಾಗಿ ಅಧಿಕೃತ ರಕ್ಷಾ ಏರ್ಪಾಡುಗಳಿಂದ ವಿಕಾಸಗೊಂಡಿವೆ. ಅಭಿವೃದ್ಧಿಶೀಲ ದೇಶಗಳಲ್ಲಿ ಮಾರುಕಟ್ಟೆ ನಿರ್ಧಾರಿತ ವಾಯಿದಾ ಮಾರುಕಟ್ಟೆಗಳ ಹಲವು ಪ್ರಚಲಿತ ಮತ್ತು ಭವಸಾಮರ್ಥ್ಯ ಪ್ರಭೇದಗಳು ಇವೆ.

## ಹರಾಜು ಮಾರುಕಟ್ಟೆಗಳು

ಹಲವು ಅಭಿವೃದ್ಧಿಶೀಲ ದೇಶಗಳಲ್ಲಿ (ಉದಾಹರಣೆ ಬೊಲಿವಿಯಾ, ಘಾನಾ, ಗಿನಿಯಾ, ಜಮೈಕಾ, ನೈಜೀರಿಯಾ, ಸೊಮಾಲಿಯಾ, ಉಗಾಂಡಾ ಮತ್ತು ಜಾಂಬಿಯಾ) ಸ್ಥಾಪಿತವಾದ ತತ್‌ಕ್ಷಣ ವಿನಿಮಯದ ಹರಾಜು ಮಾರುಕಟ್ಟೆಗಳಲ್ಲಿ ಇರುವಂಥ ವ್ಯವಸ್ಥೆಗಳನ್ನೇ ವಾಯಿದಾ ಹರಾಜು ಮಾರುಕಟ್ಟೆಗಳಿಗೂ ರೂಪಿಸಬಹುದು. ಆದಾಗ್ಯೂ ಇಂತಹ ವಾಯಿದಾ ಮಾರುಕಟ್ಟೆಗಳನ್ನು ನಿರ್ವಹಿಸುವುದು ಕಷ್ಟವಾಗಬಹುದು. ಏಕೆಂದರೆ ಹರಾಜಿಗಿಂತ ಮುಂಚಿತವಾಗಿ ವಾಯಿದಾ ವಿನಿಮಯ ಲಭ್ಯವಿರುವ ಸಮಯ ಹಾಗೂ ಆದರ ಮೊತ್ತವನ್ನು ಕರಾರುವಾಕ್ಕಾಗಿ ನಿರ್ಧರಿಸುವುದು ಸಾಧ್ಯವಾಗಲಾರದು (ತತ್‌ಕ್ಷಣದ ಹರಾಜು ಮಾರುಕಟ್ಟೆಯಲ್ಲಿ ವಿದೇಶಿ ವಿನಿಮಯವನ್ನು ಮುಂಚಿತವಾಗಿ ಒಪ್ಪಿಸಲಾಗುವುದು). ಆದ್ದರಿಂದ ಖರೀದಿದಾರರ ಹಾಗೂ ಬಿಕರಿದಾರರ ಪ್ರತಿನಿಧಿಗಳು ಹಾಜರಿದ್ದು ಬಿಡ್ಡು ಕೂಗುವ ಹರಾಜನ್ನು ಏರ್ಪಡಿಸುವುದು ಅಗತ್ಯವಾಗುತ್ತದೆ ಮತ್ತು ಆಗ ಸಮತೋಲ ಮಾರುಕಟ್ಟೆ ತೀರುವಳಿ ಬೆಲೆಗಳಲ್ಲಿ ಬಿಡ್ಡುಗಳು ಸಮಾವೇಶಗೊಳ್ಳುತ್ತವೆ. ಸದ್ಯದಲ್ಲಿ ಯಾವ ದೇಶವೂ ಅಂತಹ ಮಾರುಕಟ್ಟೆಯನ್ನು ನಿರ್ವಹಿಸುತ್ತಿಲ್ಲ. ತತ್‌ಕ್ಷಣ ವಿನಿಮಯ ಹರಾಜು ವ್ಯವಸ್ಥೆ ಚಾಲ್ತಿಯಲ್ಲಿರುವ ದೇಶಗಳ ಗುಂಪಿನಲ್ಲಿ ಇರುವ ಏಕೈಕ ವಾಯಿದಾ ಮಾರುಕಟ್ಟೆ ಎಂದರೆ ನೈಜೀರಿಯಾದ್ದು ಮಾತ್ರ. ಆದಾಗ್ಯೂ ತೈಲೇತರ ವಹಿವಾಟುಗಳಿಗೆ ಹಾಗೂ ಕೊಂಡ ತೈಲದ ದ್ವಿತೀಯಕ ವಿಕ್ರಯಗಳಿಗೆ ವಿದೇಶಿ ವಿನಿಮಯಕ್ಕಾಗಿರುವ ಸ್ವಾಯತ್ತತೆ (ಅಂತರ ಬ್ಯಾಂಕ್) ಮಾರುಕಟ್ಟೆಯಲ್ಲಿ ಮಾತ್ರ ಈ ವಾಯಿದಾ ಮಾರುಕಟ್ಟೆ ಕಾರ್ಯ ನಿರ್ವಹಿಸುತ್ತದೆ.

## ಕೇಂದ್ರೀಯ ಬ್ಯಾಂಕಿನಲ್ಲಿ ದಲ್ಲಾಳಿತ ಮಾರುಕಟ್ಟೆಗಳು

ವಾಯಿದಾ ವಹಿವಾಟುಗಳಲ್ಲಿ ಕೇಂದ್ರಿಯ ಬ್ಯಾಂಕು ದಲ್ಲಾಳಿ ಮಾಡುವುದೆಂದರೆ ಅದು ವಿನಿಮಯ ನಷ್ಟ ಸಂಭಾವ್ಯತೆಯನ್ನು ತಾನೇ ವಹಿಸಿಕೊಳ್ಳುವುದಿಲ್ಲ ಎಂಬುದು. ಪ್ರತಿಯಾಗಿ ವಾಯಿದಾ ರಕ್ಷೆ ಕೊಳ್ಳುವವರು ಮತ್ತು ಮಾರುವವರು ಒಪ್ಪಿಕೊಂಡ ದರಗಳ ಆಧಾರದ ಮೇಲೆ ಅದ ವಿವಿಧ ಪಕ್ವತೆಗಳ ವಹಿವಾಟುಗಳನ್ನು ಹೊಂದಿಸುತ್ತದೆ. ಇಂಥ ಪ್ರಕರಣಗಳಲ್ಲಿ ಕೇಂದ್ರೀಯ ಬ್ಯಾಂಕು ನಷ್ಟ ಸಂಭಾವ್ಯತಾ ಅಧಿಮೌಲ್ಯವನ್ನು ವಿಧಿಸದಿರಬಹುದು. ಆದರೆ ಸ್ವಲ್ಪ ದಲ್ಲಾಳಿ ಶುಲ್ಕವನ್ನು ವಿಧಿಸಬಹುದು. ಇಂಥಾ ಏರ್ಪಾಟುಗಳಿರುವ ಒಂದು ಮಾರುಕಟ್ಟೆಯನ್ನು ಆರಂಭಿಸುವುದರಲ್ಲಿ ಪ್ರಾಯಶಃ ಇರುವ ತೊಂದರೆಯೆಂದರೆ ವಿನಿಮಯ ದರ ನಿರೀಕ್ಷೆಗಳು ಸ್ಥಿರಗೊಳ್ಳುವವರೆಗೆ ಆಮದುದಾರರು ಮತ್ತು ರಫ್ತುದಾರರು ಈ ವಹಿವಾಟುಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ವಿಳಂಬ ಮಾಡಲು ಇಚ್ಛಿಸಬಹುದು.

ಕೇಂದ್ರೀಯ ಬ್ಯಾಂಕಿನಲ್ಲಿ ನಿಧೀಕೃತ ಮಾರುಕಟ್ಟೆಗಳು ರಕ್ಷಿತ ಬಡ್ಡಿ ಭಿನ್ನಕಗಳ ಆಧಾರದ ಮೇಲೆ ಅಥವಾ ದೇಶದ ಹಣಕಾಸು ಮಾರುಕಟ್ಟೆಗಳಲ್ಲಿರುವ (ಉದಾಹರಣೆ ಅಧಿಕೃತ ಮತ್ತು ಸಮಾಂತರ ಮಾರುಕಟ್ಟೆ) ವಿನಿಮಯ ಮತ್ತು ಅಥವಾ ಬಡ್ಡಿ ದರಗಳ ನಡುವಣ ಅಂತರಗಳಲ್ಲಿ ಪ್ರತಿಬಿಂಬಿತವಾದ ನಿರ್ದಿಷ್ಟ ಅಸಮತೋಲಗಳನ್ನು ಗಣನೆಗೆ ತೆಗೆದುಕೊಳ್ಳುವ ಸುಧಾರಿತ ಬಡ್ಡಿ ಸಾಮ್ಯತಾ ಪರಿಸ್ಥಿತಿಯ ಆಧಾರದ ಮೇಲೆ ನಿರ್ಧಾರಿತವಾದ ದರಗಳಲ್ಲಿ ವಿದೇಶಿ ವಿನಿಮಯವನ್ನು ಒದಗಿಸಲು ಕೇಂದ್ರಿಯ ಬ್ಯಾಂಕು ಒಂದು ಸಣ್ಣ ನಿಧಿಯನ್ನು ಆರಂಭತಃ ಸ್ಥಾಪಿಸಬಹುದು. ಅಂಥಾ ಯೋಜನೆ, ತನ್ನ ಆರಂಭ ದಶೆಯಲ್ಲಿ ಮೇಲೆ ವಿವರಿಸಲಾದ ವಿನಿಮಯ ದರ ಖಾತರಿ ಯೋಜನೆಗಳಂತೆಯೇ ಇರುತ್ತದೆ. ವ್ಯತ್ಯಾಸವೆಂದರೆ, ಮಾರುಕಟ್ಟೆ ಅನುಸ್ಥಾಪಿತ ಅಭಿಗಮನದಲ್ಲಿ, ವಾಯಿದಾ ದರಗಳು ಮಾರುಕಟ್ಟೆಯನ್ನು ಆವರಿಸಿಕೊಳ್ಳುವಂತೆ ಮುಕ್ತ ಸ್ಪರ್ಧೆಯತ್ತ ಚಲಿಸುವುದು ಉದ್ದೇಶವಾಗಿರುತ್ತದೆ.

## ಸಮಾಂತರ ವಾಯಿದಾ ಮಾರುಕಟ್ಟೆಗಳು

ಕೆಲವು ದೇಶಗಳಲ್ಲಿ (ಉದಾ : ಆರ್ಜೆಂಟಿನಾ) ಅಧಿಕೃತವಾಗಿ ಮಾನ್ಯತೆ ಪಡೆಯದ ಸಮಾಂತರ ಮಾರುಕಟ್ಟೆಗಳು ತತ್‌ಕ್ಷಣದ ಮತ್ತು ವಾಯಿದಾ ವಿನಿಮಯಕ್ಕಾಗಿ ಅಸ್ತಿತ್ವದಲ್ಲಿರಬಹುದು. ಸಮಾಂತರ ವಾಯಿದಾ ಮಾರುಕಟ್ಟೆಗಳನ್ನು ಸಮಾಂತರ ತತ್‌ಕ್ಷಣ ಮಾರುಕಟ್ಟೆಯ ವಿನಿಮಯ ನಷ್ಟ ಸಂಭಾವ್ಯತೆಗಳ ರಕ್ಷಣೆಗೆ ಬಳಸಬಹುದು. ಪ್ರಾಧಿಕೃತ ತತ್‌ಕ್ಷಣ ಮಾರುಕಟ್ಟೆಯಲ್ಲಿನ ನಷ್ಟ ಸಂಭಾವ್ಯತೆಗಳಿಗಿಂತ ಭಿನ್ನವಾಗಿ ಮಾರುಕಟ್ಟೆ ಭಾಗಿಗಳು ಕಾಣಬಹುದು. ಏನೇ ಇರಲಿ, ಸಮಾಂತರ ವಾಯಿದಾ ಮಾರುಕಟ್ಟೆಯಲ್ಲಿ ವಿಧಿಸುವ ಅಧಿಮೌಲ್ಯಗಳನ್ನು ಪ್ರಾಧಿಕೃತ ಮಾರುಕಟ್ಟೆಯಲ್ಲಿಯ ವಾಯಿದಾ ಅಧಿಮೌಲ್ಯವನ್ನು ನಿರ್ಧರಿಸಲು ಸಹಾಯಕವಾಗಿ ಬಳಸಬಹುದು.

## ಖಾಸಗಿ ವಲಯದ ವಾಯಿದಾ ವಿದೇಶಿ ವಿನಿಮಯ ಮಾರುಕಟ್ಟೆಗಳು

ಚರ ವಿನಿಮಯ ದರಗಳುಳ್ಳ ಅಭಿವೃದ್ಧಿಶೀಲ ದೇಶಗಳಲ್ಲಿ ವಾಯಿದಾ ವಿನಿಮಯ ಮಾರುಕಟ್ಟೆ ಸೌಲಭ್ಯಗಳು ಸಾಪೇಕ್ಷವಾಗಿ ವಿಕಾಸದ ಮೊದಲ ಹಂತದಲ್ಲಿವೆ. ಜಮೈಕ, ನೈಜೀರಿಯಾ, ಫಿಲಿಪೈನ್ಸ್, ಉರಗ್ವೆ ಮತ್ತು ಝಾಯಿರ್ ದೇಶಗಳಲ್ಲಿ ಸೀಮಿತ ಪರಿಮಾಣದಲ್ಲಿ ವಾಯಿದಾ ವಹಿವಾಟುಗಳು ಜರುಗುತ್ತವೆ. ಈ ದೇಶಗಳಲ್ಲಿ ವಾಯಿದಾ ಮಾರುಕಟ್ಟೆಗಳನ್ನು ವಿಕಾಸಗೊಳಿಸುವ ಪ್ರಯತ್ನಗಳ ಮುಖ್ಯ ಧ್ಯೇಯವೆಂದರೆ ವಾಣಿಜ್ಯ ಬ್ಯಾಂಕುಗಳಿಗೆ ಅವುಗಳ ನಿರ್ವಹಣೆಯ ಸ್ವಾತಂತ್ರ್ಯ ಕೊಡುವುದು. ಇದು ಫಿಲಿಪೈನ್ಸ್‌ನಲ್ಲಿ ಚೆನ್ನಾಗಿ ಕೆಲಸ ಮಾಡಿದೆ. ಇದಕ್ಕೆ ಒಂದು ಕಾರಣ ಹೀಗಿರಬಹುದು. ಅಂಥ ರಕ್ಷೆಯ ಉಪಯೋಗಗಳ ಬಗೆಗೆ ಖಾಸಗಿ ವಲಯದ ಅರಿವನ್ನು ಹೆಚ್ಚಿಸಿರುವ ವ್ಯಾಪಕ ವಾಯಿದಾ ರಕ್ಷೆಯ ಅಧಿಕೃತ ಏರ್ಪಾಡುಗಳನ್ನು ಸ್ವಲ್ಪ ಕಾಲದಿಂದ ಫಿಲಿಪೈನ್ಸ್ ಜಾರಿಯಲ್ಲಿ ತಂದಿದೆ.

ಚರ ವಿನಿಮಯ ದರ ವ್ಯವಸ್ಥೆಯನ್ನು ಹೊಂದಿರದ ಅಭಿವೃದ್ಧಿಶೀಲ ರಾಷ್ಟ್ರಗಳ ಗುಂಪಿನಲ್ಲಿ ಮುಖ್ಯವಾಗಿ ಅಧಿಕೃತ ವಾಯಿದಾ ರಕ್ಷಾ ಯೋಜನೆ ರೂಪದಲ್ಲಿ ವಾಯಿದಾ ಮಾರುಕಟ್ಟೆಗಳು ವಿಕಾಸಗೊಂಡಿವೆ. ಈ ದೇಶಗಳಲ್ಲಿ ಬ್ರೆಜಿಲ್, ಚಿಲಿ, ಇಂಡೋನೇಷಿಯಾ, ಸಿಂಗಪೂರ್, ಶ್ರೀಲಂಕಾ, ಥೈಲೆಂಡ್ ಮತ್ತು ಸಂಯುಕ್ತ ಅರಬ್ ಎಮಿರೇಟ್ಸ್, ಜೋರ್ಡಾನ್, ಕೊರಿಯಾ ಗಣರಾಜ್ಯ ಸೇರಿವೆ. ಇಂಡೋನೇಷಿಯಾ ಮಲೇಷಿಯಾ, ಸಿಂಗಪೂರ್ ಮತ್ತು ಸಂಯುಕ್ತ ಅರಬ್ ಎಮಿರೇಟ್ಸ್‌ನ ಮಾರುಕಟ್ಟೆಗಳು ವಿನಿಯಮನಕ್ಕೆ ಒಳಪಟ್ಟಿಲ್ಲವಾದರೆ ಥೈಲ್ಯಾಂಡ್‌ನ ಮಾರುಕಟ್ಟೆ ಅತ್ಯಂತ ಸ್ವಲ್ಪವಾದ ವಿನಿಯಮನಕ್ಕೆ ಒಳಪಟ್ಟಿದೆ. ಈ ಮಾರುಕಟ್ಟೆಗಳಲ್ಲಿ ವಾಯಿದಾ ಅಧಿಮೌಲ್ಯಗಳು ಅಥವಾ ವಾಯಿದಾ ವಟ್ಟಗಳು ಅಂತರರಾಷ್ಟ್ರೀಯ ಬಡ್ಡಿದರಗಳಲ್ಲಿಯ ಭಿನ್ನಕಗಳನ್ನು ನಿಕಟವಾಗಿ ಅನುಸರಿಸಿವೆ.

ಅಂತರರಾಷ್ಟ್ರೀಯ ವ್ಯಾಪಾರ ವಹಿವಾಟುಗಳಿಗೆ ಸಂಬಂಧಿಸಿದಂತೆ ವಾಯಿದಾ ವಿನಿಯಮನದ ಖರೀದಿ ಮತ್ತು ಬಿಕರಿಗಳಿಗೆ ಬ್ಯಾಂಕುಗಳು ನೀಡುವ ರಕ್ಷೆಯನ್ನು ಸಾಮಾನ್ಯವಾಗಿ ಮಿತಿಗೊಳಿಸುವುದರ ಮೂಲಕ ಮತ್ತು ವ್ಯಾಪಾರ ಧನಪೋಷಣೆ ಅವಧಿಗಳಿಗೆ ಪಕ್ವತೆಯ ಅವಧಿಗಳೂ ಅನುಗುಣವಾಗಿರುವಂತೆ ವಿಧಿಸುವುದರ ಮೂಲಕ ಹಲವು ದೇಶಗಳಲ್ಲಿ ವಾಯಿದಾ ಮಾರುಕಟ್ಟೆಗಳಿಗೆ ಪ್ರವೇಶವನ್ನು ನಿರ್ಬಂಧಿಸಲಾಗಿದೆ. ಬ್ರೆಜಿಲ್, ನೈಜೀರಿಯಾ ಮತ್ತು ಶ್ರೀಲಂಕಾ ದೇಶಗಳ ವಾಯಿದಾ ಮಾರುಕಟ್ಟೆಯಲ್ಲಿ ವಾಣಿಜ್ಯ ಉದ್ದೇಶಗಳಿಗೆ ಅವಕಾಶವಿದೆ. ಜಮೈಕಾದಲ್ಲಿ ತತ್‌ಕ್ಷಣದ ಹರಾಜು ಮಾರುಕಟ್ಟೆಗೆ ಅರ್ಹತೆ ಇರುವ ಆಮದುದಾರರು ಮಾತ್ರ ವಾಯಿದಾ ಮಾರುಕಟ್ಟೆಯಲ್ಲಿ ಭಾಗವಹಿಸಬಹುದಾದರೆ ಜೋರ್ಡಾನಿನಲ್ಲಿ ನಿಗದಿತ ವಾಣಿಜ್ಯ ಕಲಾಪಗಳಿಗೆ ಮಾರುಕಟ್ಟೆ ಸೀಮಿತವಾಗಿದೆ. ಕೊರಿಯಾದಲ್ಲಿ ಬ್ಯಾಂಕುಗಳ ನಡುವಣ ವಾಯಿದಾ ವಹಿವಾಟುಗಳ ಮೇಲೆ ರಕ್ಷಾ ನೀಡಿಕೆಗೆ ನಿರ್ಬಂಧಗಳು ಜಾರಿಯಲ್ಲಿಲ್ಲವಾದರೂ ಬ್ಯಾಂಕೇತರ ಸಂಸ್ಥೆಗಳೊಂದಿಗಿನ ವಹಿವಾಟುಗಳನ್ನು ನಿರ್ದಿಷ್ಟ ವಾಣಿಜ್ಯ ವಹಿವಾಟುಗಳಿಂದಾಗಿ ಮಾಡುವ ವಾಯಿದಾ ಖರೀದಿ ಮತ್ತು ಬಿಕರಿಗಳಿಗೆ ನಿರ್ಬಂಧಗೊಳಿಸಲಾಗಿದೆ. ಪಕ್ವತೆಯ ಅವಧಿಗಳ ಮೇಲೆ ವಿಧಿಸಲಾಗುವ ಅತ್ಯಂತ ಸಾಮಾನ್ಯ ನಿರ್ಬಂಧವೆಂದರೆ ಆರು ತಿಂಗಳ ವರೆಗಿನ ಮಿತಿ (ಉದಾ : ಬ್ರೆಜಿಲ್, ಚಿಲಿ, ಜಮೈಕಾ, ಥೈಲ್ಯಾಂಡ್ ಮತ್ತು ಶ್ರೀಲಂಕಾಗಳಲ್ಲಿ). ಜೋರ್ಡಾನಿನಲ್ಲಿ ಒಂದು ವರ್ಷದ ವರೆಗಿನ ರಕ್ಷೆಗೆ ಅನುಮತಿ ಇದೆ ಮತ್ತು ಕೊರಿಯಾದಲ್ಲಿ ಕೂಡ ಬ್ಯಾಂಕೇತರ ಸಂಸ್ಥೆಗಳಿಗೆ ಈ ಅನುಮಿತಿಯಿದೆ (ಅಂತರ ಬ್ಯಾಂಕ್ ವಹಿವಾಟುಗಳಲ್ಲಿ ಪಕ್ವತಾ ಅವಧಿಗಳಿಗೆ ಸಂಬಂಧಿಸಿದಂತೆ ನಿರ್ಬಂಧವಿಲ್ಲ.) ಬ್ರೆಜಿಲ್, ಚಿಲಿ, ಜೋರ್ಡಾನ್, ಥೈಲ್ಯಾಂಡ್ ಮತ್ತು ನೈಜೀರಿಯಾಗಳಲ್ಲಿ ಈ ನಿರ್ಬಂಧಗಳ ಜೊತೆಗೆ ವಿವಿಧ ಬ್ಯಾಂಕುಗಳ ಮುಕ್ತ ಸ್ಥಿತಿಗೆ ಮಿತಿಗಳಿವೆ. ಆದರೆ ಜಮೈಕಾದಲ್ಲಿ ವಾಣಿಜ್ಯ ಬ್ಯಾಂಕುಗಳ ಅರಕ್ಷಿತ ವಾಯಿದಾ ಹೊಣೆಗಳಿಗೆ ಒಂದು ಕೋಟಿ ಡಾಲರುಗಳ ಒಟ್ಟು ಮಿತಿ ಅನ್ವಯವಾಗುತ್ತದೆ.

ಈಗ ಇರುವ ಬಂಡವಾಳದ ಮೇಲಣ ನಿಯಂತ್ರಣಗಳನ್ನು ಬೆಂಬಲಿಸಲು ಅಥವಾ ಮಾರುಕಟ್ಟೆಯ ಮೇಲಣ ಸಟ್ಟಾ ಪ್ರಭಾವಗಳನ್ನು ಹತ್ತಿಕ್ಕಲು ನಿರ್ಬಂಧಗಳನ್ನು ಸ್ಥಾಪಿಸಲಾಗಿದೆ. ವಾಸ್ತವವಾಗಿ ಮಾರುಕಟ್ಟೆ ನಿರ್ಧಾರಿತ ವಾಯಿದಾ ದರಗಳಿರುವ ಕೆಲವು ದೇಶಗಳಲ್ಲಿ ಮಾತ್ರ ಬಂಡವಾಳದ ಹೊರ ಹರಿವುಗಳ ಮೇಲೆ ನಿರ್ಬಂಧಗಳಿಲ್ಲ. ಮತ್ತು ಅಲ್ಲಿ ವಿದೇಶಿ ಚಲಾರ್ಥ ಖಾತೆಗಳನ್ನು ಹೊಂದಿರಲು ನಿವಾಸಿಗಳಿಗೆ ಅವಕಾಶವಿದೆ (ಇಂಡೊನೇಷಿಯಾ, ಮಲೇಷಿಯಾ, ಸಿಂಗಪೂರ್ ಮತ್ತು ಸಂಯುಕ್ತ ಅರಬ್ ಎಮಿರೇಟ್ಸ್). ಅಂತರರಾಷ್ಟ್ರೀಯ ಬಂಡವಾಳದ ಹರಿವುಗಳ ಮೇಲೆ ಸಾಧಾರಣ ನಿರ್ಬಂಧಗಳ ಅಸ್ತಿತ್ವದಿಂದ ವಾಣಿಜ್ಯ ರಕ್ಷೆಗಾಗಿ ಖಾಸಗಿ ಅಥವಾ ಮಾರುಕಟ್ಟೆ ನಿರ್ಧಾರಿತ ವಾಯಿದಾ ಮಾರುಕಟ್ಟೆಗಳ ಸ್ಥಾಪನೆಗೆ ಅಡ್ಡಿಯಿಲ್ಲ ಎಂಬುದನ್ನು ಇದು ಸೂಚಿಸುತ್ತದೆ.

## ವಾಯಿದಾ ಮಾರುಕಟ್ಟೆಗಳ ವಿಕಾಸ

ಅರ್ಥವ್ಯವಸ್ಥೆಯೊಂದರ ಹಲವು ಸಾಮಾನ್ಯ ಗುಣಲಕ್ಷಣಗಳು ವಾಯಿದಾ ಮಾರುಕಟ್ಟೆ ಏರ್ಪಾಡುಗಳ ಬೆಳವಣಿಗೆಗಳನ್ನು ನಿರ್ಧರಿಸಲು ಸಹಾಯ ಮಾಡುತ್ತವೆ. ಇವುಗಳಲ್ಲಿ ಮುಖ್ಯವಾದುವೆಂದರೆ ವಾಯಿದಾ ರಕ್ಷೆ ಏರ್ಪಾಡುಗಳ ವಿಕಾಸದ ಪ್ರಸಕ್ತ ಘಟ್ಟ (ಇದ್ದರೆ) ಮತ್ತು ಹಣಕಾಸು ವ್ಯವಸ್ಥೆಯ ಸಾಂಸ್ಥಿಕ ಗುಣಲಕ್ಷಣಗಳು.

ವಾಯಿದಾ ರಕ್ಷೆಯನ್ನು ನೀಡುವುದಕ್ಕೆ ತಂತ್ರಜ್ಞಾನಗಳ ಆಯ್ಕೆಯಲ್ಲಿ ಕೇಂದ್ರೀಯ ಬ್ಯಾಂಕು ಪ್ರಮುಖ ಪಾತ್ರ ಹೊಂದಿದೆ. ಒಂದೆರಡು ಅಭಿವೃದ್ಧಿಶೀಲ ದೇಶಗಳಲ್ಲಿ ವಾಯಿದಾ ಮಾರುಕಟ್ಟೆಗಳು ಹೆಚ್ಚು ಕಡಿಮೆ ತಾವಾಗಿಯೇ ವಿಕಾಸಗೊಂಡಿದ್ದಾಗ್ಯೂ, ಬಹಳಷ್ಟು ಸಂದರ್ಭಗಳಲ್ಲಿ ಕೇಂದ್ರೀಯ ಬ್ಯಾಂಕುಗಳನ್ನು ತೊಡಗಿಸಿಕೊಂಡ ಹೆಚ್ಚು ಸೀಮಿತ ಏರ್ಪಾಡುಗಳಿಂದ ಮುಕ್ತ ವಾಯಿದಾ ಮಾರುಕಟ್ಟೆಗಳು ವಿಕಾಸಗೊಂಡಿವೆ. ಕೇಂದ್ರೀಯ ಬ್ಯಾಂಕಿನ ತೊಡಗುವಿಕೆಯ ಪ್ರಮಾಣದಲ್ಲಿ ದೇಶದಿಂದ ದೇಶಕ್ಕೆ ವ್ಯತ್ಯಾಸವಿದ್ದರೂ, ಕೇಂದ್ರೀಯ ಬ್ಯಾಂಕ್ ವಿನಿಮಯ ದರದ ಹೊಣೆಯನ್ನು ಆದಷ್ಟು ಬೇಗ ನಿವಾರಿಸಿಕೊಳ್ಳಬೇಕು ಎಂಬುದು ನಷ್ಟಗಳ ಅನುಭವದಿಂದ ವ್ಯಕ್ತವಾಗುತ್ತದೆ.

ವಾಯಿದಾ ವಹಿವಾಟುಗಳನ್ನು ಜಾರಿಗೆ ತರುವ ಮೊದಲ ಹೆಜ್ಜೆಯಾಗಿ ಈ ವಹಿವಾಟುಗಳು ತಾವಾಗಿಯೇ ಉಗಮಿಸದಿದ್ದಲ್ಲಿ ಆಮದುದಾರರಿಗೆ ರಕ್ಷೆ ಒದಗಿಸಲು ಕೇಂದ್ರ ಬ್ಯಾಂಕು ಸಣ್ಣ ನಿಧಿಯೊಂದನ್ನು ಸ್ಥಾಪಿಸಬಹುದು. ರಫ್ತುದಾರರಿಂದ ವಾಯಿದಾ ವಿದೇಶಿ ವಿನಿಮಯವನ್ನು ಕೊಂಡು ಈ ನಿಧಿಯನ್ನು ತುಂಬಿಕೊಳ್ಳಬಹುದು— ಇತರ ಪ್ರಸ್ತುತ ರಕ್ಷಾ ಯೋಜನೆಗಳನ್ನು ಕೊನೆಗೊಳಿಸಬಹುದು ಮತ್ತು ಹೊಸ ನಿಧಿಯ ಮೂಲಕ ಅಧಿಕೃತ ಬೆಂಬಲವನ್ನು ದೊರಕಿಸಬಹುದು. ಆರಂಭದಲ್ಲಿ ಮಾರುಕಟ್ಟೆಯಲ್ಲಿ ವಹಿವಾಟುಗಳಲ್ಲಿ ತೊಡಗಲು ರಫ್ತುದಾರರ ಮತ್ತು ಆಮದುದಾರರ ಇಚ್ಛೆಯು ಕೇಂದ್ರೀಯ ಬ್ಯಾಂಕು ವಿಧಿಸಿದ ದರಗಳಿಗೆ ಬಹುಶಃ ತೀವ್ರವಾಗಿ ಸ್ಪಂದಿಸುತ್ತದೆ. ಮಾರುಕಟ್ಟೆಯನ್ನು ಸ್ಥಾಪಿಸುವಾಗ ಆಮದುದಾರರಿಗೆ ಒಪ್ಪಿಗೆಯಾಗಬಹುದಾದ್ದು ಮಾತ್ರವಲ್ಲದೆ ನಿಧಿಯ ದ್ರವತ್ವವನ್ನು ಕಾಯ್ದುಕೊಳ್ಳಲು ರಫ್ತುದಾರರಿಂದ ಸಾಕಷ್ಟು ವಾಯಿದಾ ವಿದೇಶಿ ವಿನಿಮಯವನ್ನು ಉತ್ಪಾದಿಸುವಂತೆ ದರಗಳಿಗಾಗಿ ಕೇಂದ್ರಬ್ಯಾಂಕು ಅನ್ವೇಷಣೆ ನಡೆಸುತ್ತವೆ. ಈ ಉದ್ದೇಶಕ್ಕಾಗಿ—ಆದರೆ ತಾತ್ಕಾಲಿಕ ಮಾತ್ರ—ವಿದೇಶಿ ವಿನಿಮಯವನ್ನು ಕೊಳ್ಳುವಾಗ ಕೇಂದ್ರ ಬ್ಯಾಂಕು ಸ್ವತಃ ಅಧಿಮೌಲ್ಯವೊಂದನ್ನು ಪಾವತಿ ಮಾಡಬಹುದು. ಆದಾಗ್ಯೂ, ಕೇಂದ್ರೀಯ ಬ್ಯಾಂಕಿನ ನಿಧಿ ಶೀಘ್ರವಾಗಿ ಬರಿದಾಗುವುದೆಂಬುದು ಸ್ಥಿರ ದರ ವಾಯಿದಾ ರಕ್ಷೆ ಏರ್ಪಾಡುಗಳ ಅಡಿಯಲ್ಲಿ ಸಂಭವಿಸುವ ಅಂತಹ "ಹಿಮ್ಮೊಗನಾದ ಹರಹುಗಳ" ಅನುಭವದಿಂದ ವ್ಯಕ್ತವಾಗುತ್ತದೆ.

ತತ್‌ಕ್ಷಣ ವಿನಿಮಯ ದರಗಳು ಮತ್ತು ಬಡ್ಡಿ ದರಗಳು ಸಮತೋಲದಲ್ಲಿರುವ ದೇಶಗಳಲ್ಲಿಯ ವಾಯಿದಾ ದರ ಮೌಲ್ಯಕ್ಕೆ ರಕ್ಷಿತ ಬಡ್ಡಿ ಸಾಮ್ಯ ಪರಿಸ್ಥಿತಿ ಸಹಾಯಕವಾಗಬಹುದು. ಆದಾಗ್ಯೂ ದೇಶದ ನಿರ್ದಿಷ್ಟ ಹಣಕಾಸು ಪರಿಸರಕ್ಕೆ ಕಾರಣವನ್ನು ಕಂಡುಹಿಡಿಯುವುದು ಮುಖ್ಯವಾಗಿದೆ. ತತ್‌ಕ್ಷಣ ವಿನಿಮಯ ದರಗಳು ಮತ್ತು ಬಡ್ಡಿ ದರಗಳು ಅತೀವ ಅಸಮತೋಲದಲ್ಲಿರುವ ಅನೇಕ ದೇಶಗಳಿಗೆ ರಕ್ಷಿತ ಬಡ್ಡಿ ಸಾಮ್ಯತೆಗಾಗಿ ಪರ್ಯಾಯವೊಂದನ್ನು ಹುಡುಕುವುದು ಅವಶ್ಯವಾಗುತ್ತದೆ.

[20ನೇ ಪುಟ ನೋಡಿ]

# ಉದ್ದೇಶಗಳ ಮೇರೆಗೆ ವ್ಯವಸ್ಥಾಪನ

## ಬ್ಯಾಂಕುಗಳಲ್ಲಿ ಒಂದು ಪ್ರಯೋಗ

ಬಿ. ಎಸ್. ಚಂದ್ರಶೇಖರ
ವ್ಯವಸ್ಥಾಪಕ
ಭಾರತೀಯ ಸ್ಟೇಟ್ ಬ್ಯಾಂಕ್
ಕಡಗಂಚಿ

ಪರಸ್ಪರ ಸಹಕಾರ ಮನೋಭಾವವುಳ್ಳ ಸದಸ್ಯರ ತಂಡವೊಂದು ಕೆಲವು ಸಾಮಾನ್ಯ ಗುರಿಗಳನ್ನು ಸಾಧಿಸುವತ್ತ ಚಟುವಟಿಕೆಗಳನ್ನು ನಿರ್ದೇಶಿಸುವ ಪ್ರಕ್ರಿಯೆಯನ್ನು ವ್ಯವಸ್ಥಾಪನವೆಂದು ವ್ಯಾಖ್ಯಾನಿಸಲಾಗಿದೆ. ಉದ್ದೇಶಿತ ಗುರಿಗಳನ್ನು ಈಡೇರಿಸುವುದೇ ಒಳ್ಳೆಯ ವ್ಯವಸ್ಥಾಪನದ ಮುಖ್ಯ ಕಾರ್ಯ. ಎಲ್ಲ ಸಂಸ್ಥೆಗಳಿಂದಲೂ ನಿರೀಕ್ಷಿಸುವುದು ಹೆಚ್ಚುಹೆಚ್ಚಾಗುತ್ತಿರುವ ಇಂದಿನ ಪರಿಸ್ಥಿತಿಯಲ್ಲಿ ವ್ಯವಸ್ಥಾಪಕರು ಹೊರಬೇಕಾದ ಜವಾಬ್ದಾರಿ ಅಧಿಕ. ಮುಂಜಾನೆಯಿಂದ ಸಂಜೆಯವರೆಗೆ ಕಾಗದಪತ್ರಗಳ ವಿಲೇವಾರಿ, ದೂರವಾಣಿ ಕರೆಗಳು, ಕಛೇರಿಯ ಸಮಸ್ಯೆಗಳು, ಚರ್ಚೆ, ವಿವಿಧ ರೀತಿಯ ಸಭೆಗಳು, ಕಾರ್ಯಕ್ರಮಗಳು, ಗ್ರಾಹಕರ ದೂರುಗಳು, ಕೆಲಸಗಾರರ ಮತ್ತು ಅಧಿಕಾರಿಗಳ ಸಮಸ್ಯೆಗಳು— ಇಂಥ ಅನೇಕ ವಿಷಯಗಳಲ್ಲಿ ವ್ಯವಸ್ಥಾಪಕರು ಮಗ್ನರಾಗಿರುವುದು ತಿಳಿಯದ ವಿಷಯವೇನಲ್ಲ. ವ್ಯವಸ್ಥಾಪಕರ ಕೆಲಸ ಚಟುವಟಿಕೆಗಳ ನಿರ್ದೇಶನವಾಗಿದ್ದು ನೇರವಾಗಿ ಅವರೇ ಕೆಲಸ ಮಾಡಬೇಕಾದುದಿಲ್ಲವೆಂದರೂ ಅವರು ಸದಾ ಗಡಿಬಿಡಿಯ ವ್ಯಕ್ತಿಗಳಾಗಿರುವುದು ಸೋಜಿಗದ ವಿಷಯವೇ. ಹಿರಿಯ ವ್ಯವಸ್ಥಾಪಕರಲ್ಲಿ ಈ ಗಡಿಬಿಡಿಯ ವಿಷಯ ಹೆಚ್ಚು ಸತ್ಯ. ದಿನಕ್ಕೆ 8 ಗಂಟೆಗಿಂತಲೂ ಹೆಚ್ಚು ಹೊತ್ತು ಕಛೇರಿಯಲ್ಲಿ ಕೆಲಸ ಮಾಡಿ ಮನೆಗೂ ಕಛೇರಿಯ ಕಂತೆ ಹೊತ್ತು ತರುವುದು ಅಪರೂಪವೇನಲ್ಲ.

"ಹೀಗೇಕೆ? ನಾವೆಲ್ಲಿ ತಪ್ಪಿದೆವು?" ಎಂದು ಪ್ರಶ್ನಿಸಿಕೊಳ್ಳುವ ವ್ಯವಧಾನವೂ ಇಲ್ಲದಂತೆ ಕಛೇರಿಯ ನಿತ್ಯಚರ್ಯೆಗಳಲ್ಲಿ ಮುಳುಗುವವರೇ ಬಹು ಮಂದಿ. ಕೊಂಚ ಕಾಲ ಈ ಒತ್ತಡದಿಂದ ಬಿಡುಗಡೆ ಪಡೆದು, ತಾಳ್ಮೆಯನ್ನು ತಳೆದು, "ತನ್ನ ಕೆಲಸದ ಉದ್ದೇಶವೇನು? ತಾನು ಆಸಕ್ತಿ ವಹಿಸಬೇಕಾದ ಮುಖ್ಯ ಸಂಗತಿಗಳು ಯಾವುವು? ತನ್ನನ್ನು ಆ ಹುದ್ದೆಯಲ್ಲಿ ನೇಮಕ ಮಾಡಿರುವ ಉದ್ದೇಶ ಸಾರ್ಥಕವಾಗಬೇಕಾದರೆ ತಾನು ಯಾವ ಗುರಿಗಳನ್ನು ಸಾಧಿಸಬೇಕು?" ಎಂಬ ಸರಳವಾದ ಪ್ರಶ್ನೆಗಳನ್ನು ಹಾಕಿಕೊಳ್ಳುವುದೂ, ಅವನ್ನು ಉತ್ತರಿಸುವುದೂ ಪ್ರತಿಯೊಬ್ಬ ವ್ಯವಸ್ಥಾಪಕನೂ ಮಾಡಬೇಕಾದ ಕೆಲಸ.

ಕೆಲವು ವ್ಯವಸ್ಥಾಪಕರು ತಮ್ಮ ಮೇಜಿಗೆ ಬರುವ ಕೆಲಸದಿಂದ ತಮ್ಮ ಹುದ್ದೆಯ ಸ್ವರೂಪವನ್ನೂ ಗಡಿಯಾರದಿಂದ ಅದರ ಮಿತಿಯನ್ನೂ ನಿರ್ಧರಿಸುತ್ತಾರೆ ಎಂಬುದು ಒಂದು ನಾಣ್ಣುಡಿ. ಎಷ್ಟೋ ವ್ಯವಸ್ಥಾಪಕರು ತಮ್ಮ ಗುರಿಗಳನ್ನು ಮರುಹೊಂದಾಣಿಕೆ ಮಾಡಿಕೊಳ್ಳುವ ಮೂಲಕ, ನಿರ್ದಿಷ್ಟ ಗುರಿಗಳನ್ನು

## ಕಡಿಮೆ ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ವಾಯಿದಾ ವಿನಿಮಯ ಮಾರುಕಟ್ಟೆಗಳು

[19ನೇ ಪುಟದಿಂದ ಮುಂದುವರಿದುದು]

ಉದಾಹರಣೆಗಾಗಿ ಪ್ರಸಕ್ತ ದೇಶೀಯ ಹಣದುಬ್ಬರದ ದರದಲ್ಲಿ ಡಾಲರ್‌ನ ವಾಯಿದಾ ಅಧಿಮೌಲ್ಯಕ್ಕೆ ದೇಶೀಯ ಅರ್ಥವ್ಯವಸ್ಥೆಯಲ್ಲಿನ ನೈಜ ಬಡ್ಡಿದರದ ಒಂದು ಅಂದಾಜನ್ನು ಕೂಡಿ, ಯೂರೋ ಡಾಲರ್ ಮಾರುಕಟ್ಟೆಯಲ್ಲಿನ ಬಡ್ಡಿದರವನ್ನು ಕಳೆದು ಒಂದು ಸರಳ ಸಮೀಕರಣ ಮಾಡಬಹುದು. ಸಮಾಂತರ ಮಾರುಕಟ್ಟೆ ವಿನಿಮಯ ದರದಲ್ಲಿ ಅಥವಾ ವ್ಯಾಪಕವಾಗಿಯೇ ಅಲ್ಲದೆ ಪರಿಣಾಮಕಾರಿಯಾಗಿಯೂ ಇರುವ ನಿರ್ಬಂಧಗಳಲ್ಲಿ (ಉದಾಹರಣೆಗೆ) ಕಂಡಿರುವಂತೆ, ತತ್‌ಕ್ಷಣ ವಿನಿಮಯ ದರಗಳ ಅಸಮತೋಲ ಹೆಚ್ಚಾಗಿರುವಲ್ಲಿ ಮಾರುಕಟ್ಟೆ ತೀರುವಳಿ ದರಗಳನ್ನು ಸ್ಥಾಪಿಸಲು ಲೆಕ್ಕ ಹಾಕಿದ ಬಡ್ಡಿ ಸಾಮ್ಯತಾ ಮಟ್ಟಕ್ಕೂ ಆಚೆಗೆ ಅಧಿಮೌಲ್ಯವನ್ನು ಹೆಚ್ಚಿಸುವುದು ಅಗತ್ಯವಾಗಬಹುದು. ವಾಯಿದಾ ಮಾರುಕಟ್ಟೆಯನ್ನು ಸ್ಥಾಪಿಸುವುದಕ್ಕೆ ಮುನ್ನ ಅದರಲ್ಲಿ ಅಂತಸ್ಥವಾಗಿರುವ ಅಸಮತೋಲವನ್ನು ನಿರ್ಮೂಲ ಮಾಡುವುದು ಅಥವಾ ಕಡಿಮೆ ಮಾಡುವುದು ಹೆಚ್ಚು ಉಚಿತವಾಗಿರಬಹುದು. ಆರಂಭಿಕ ವಾಯಿದಾ ದರವೊಂದು ಸ್ಥಾಪಿತವಾದ ಮೇಲೆ ಖರೀದಿದಾರ ಮತ್ತು ಬಿಕರಿದಾರರಿಬ್ಬರನ್ನೂ ಆಕರ್ಷಿಸಲು, ದರವನ್ನು ಮತ್ತು ಕೇಂದ್ರ ಬ್ಯಾಂಕಿನ ನಿಧಿಯಿಂದ ದೇಯವಾಗುವ ಭಾಗವನ್ನು ಸತತವಾಗಿ ಹೊಂದಿಸುವುದು ಅಗತ್ಯವಾಗುತ್ತದೆ.

ವಾಣಿಜ್ಯ ಬ್ಯಾಂಕಿನ ವಾಯಿದಾ ಮಾರುಕಟ್ಟೆಗೆ ಸ್ಥಿತ್ಯಂತರವನ್ನು ಸುಗಮಗೊಳಿಸುವ ಸಲುವಾಗಿ ಕೇಂದ್ರೀಯ ಬ್ಯಾಂಕು ಪ್ರಾರಂಭದಿಂದಲೇ ಈ ಯೋಜನೆಯನ್ನು ವಾಣಿಜ್ಯ ಬ್ಯಾಂಕುಗಳ ಮೂಲಕ ನಡೆಸಬಹುದು. ಈ ಯೋಜನೆಯನ್ನು ನಿರ್ವಹಿಸಲು ಕೇಂದ್ರೀಯ ಬ್ಯಾಂಕು ವಾಣಿಜ್ಯ ಬ್ಯಾಂಕುಗಳಿಗೆ ಸ್ವಲ್ಪವೇ ಭಾಗವನ್ನು ಮಾತ್ರವೇ ಬಿಡುವುದು ಮುಖ್ಯವಾಗುತ್ತದೆ. ಏಕೆಂದರೆ ನಿಧೀಕೃತ ಏರ್ಪಾಡಿನ ಮೂಲಕ ಆರಂಭದಲ್ಲಿ ಕೇಂದ್ರ ಬ್ಯಾಂಕು ಸ್ವಲ್ಪ ಭಾಗ ನಷ್ಟ ಸಂಭಾವ್ಯತೆಯನ್ನು ವಹಿಸಿಕೊಳ್ಳುತ್ತದೆ. ಇಂಥ ಏರ್ಪಾಡುಗಳ ವಹಿವಾಟು ವೆಚ್ಚಗಳು ಸಾಪೇಕ್ಷವಾಗಿ ಕಡಿಮೆಯಾಗಿರುತ್ತವೆ. ಸ್ಥಿತ್ಯಂತರದ ಅಲ್ಪ ಅವಧಿಯ ಅನಂತರ, ಸಮತೋಲ ವಾಯಿದಾ ದರವೊಂದರ ಸ್ಥಾಪನೆಯನ್ನು ಮಾಡಿದ ಮೇಲೆ, ಕೇಂದ್ರ ಬ್ಯಾಂಕು ಮಾರುಕಟ್ಟೆಯಿಂದ ವಾಪಸಾಗುತ್ತದೆ.

ಈ ಸ್ಥಿತ್ಯಂತರದ ಕಾಲದಲ್ಲಿ ವಾಯಿದಾ ಅಧಿಮೌಲ್ಯ ಅಥವಾ ವಟ್ಟಗಳನ್ನು ವಾಸ್ತವತೆಯ ಮಟ್ಟಗಳಲ್ಲಿ ಕಾಯ್ದುಕೊಳ್ಳುವ ಸಲುವಾಗಿ ಅಂತರರಾಷ್ಟ್ರೀಯ ಮಾರುಕಟ್ಟೆಗೆ ಸಂಬಂಧಿಸಿದ ದೇಶೀಯ ಹಣ ಮತ್ತು ರಾಜ್ಯಕೋಶೀಯ ಸ್ಥಿತಿಗತಿಗಳನ್ನು ಕೇಂದ್ರ ಬ್ಯಾಂಕು ನಿಕಟವಾಗಿ ಪರಿವೀಕ್ಷಿಸುವುದು. ಅಲ್ಲದೆ, ವಾಯಿದಾ ಮಾರುಕಟ್ಟೆಗಳು ಅಸ್ಥಿರಗೊಳ್ಳುವುದನ್ನು ಮತ್ತು ನಾಶಗೊಳ್ಳುವುದನ್ನು ನಿವಾರಿಸಲು ಮೂಲ ಹಣಕಾಸು ಚರಗಳಲ್ಲಿ ಹಠಾತ್ ಮತ್ತು ಅಗಾಧ ಚಲನೆಗಳನ್ನು ತಪ್ಪಿಸುವ ರೀತಿಯಲ್ಲಿ ದೇಶಿಯ ಹಣ ಮತ್ತು ವಿನಿಮಯ ದರ ನೀತಿಗಳನ್ನು ನಿರ್ವಹಿಸಬೇಕು.

ಮಾರುಕಟ್ಟೆ ನಿರ್ಧಾರಿತ ವಾಯಿದಾ ದರ ವ್ಯವಸ್ಥೆ ಈಗಾಗಲೇ ಇಲ್ಲದ ಯಾವುದೇ ಅಭಿವೃದ್ಧಿಶೀಲ ದೇಶಕ್ಕಾದರೂ, ಮೇಲೆ ಸೂಚಿಸಿದ ರೀತಿಯಲ್ಲಿ ವಾಯಿದಾ ವಿನಿಮಯ ಏರ್ಪಾಡುಗಳನ್ನು ವಿಕಾಸಗೊಳಿಸುವ ತಂತ್ರವ್ಯೂಹ ಒಂದು ಲಭ್ಯವಿದೆ. ಸ್ಥಿರ ಅಥವಾ ನಿರ್ವಾಹಿತ ವಾಯಿದಾ ಏರ್ಪಾಡುಗಳು ಈ ರೀತಿಯಲ್ಲಿ ವಿಕಾಸಗೊಳ್ಳಬಲ್ಲವು. ನಿರ್ವಾಹಿತ ಮಾರುಕಟ್ಟೆ ಸಮೀಕರಣ ಏರ್ಪಾಡುಗಳಿಂದ ಈ ಸ್ಥಿತ್ಯಂತರ ಕ್ಷಿಪ್ರಗೊಳ್ಳಬಹುದು. ಮೇಲೆ ವಿವರಿಸಿದಂತೆ ಪೂರೈಕೆ ಮತ್ತು ಬೇಡಿಕೆಗಳ ನಡುವೆ ಸಮತೋಲವೊಂದಕ್ಕೆ ಸಾಧಾರಣವಾದ ವಿನಿಮಯ ನಿಯಂತ್ರಣದ ಅಸ್ತಿತ್ವವು ಅವಕಾಶ ನೀಡುವ ವರೆಗೆ ಅದು ವಾಯಿದಾ ವಿನಿಮಯ ಮಾರುಕಟ್ಟೆಯ ನಿರ್ಮಾಣವನ್ನು ತಳ್ಳಿಹಾಕುವುದಿಲ್ಲ. ವಾಯಿದಾ ಮಾರುಕಟ್ಟೆಯ ವಿಕಾಸಕ್ಕೆ ಅವಕಾಶ ನೀಡುವಂತಹ ತತ್‌ಕ್ಷಣ ವಿನಿಮಯ ಮತ್ತು ಬಡ್ಡಿದರಗಳ ನೀತಿಗಳಲ್ಲಿ ಹೆಚ್ಚಿನ ನೈಜತೆಯತ್ತ ನಿರಂತರ ಪ್ರಗತಿಯ ಆವಶ್ಯಕತೆಯನ್ನು ಮಾರುಕಟ್ಟೆಗಳ ಇಲ್ಲಿಯವರೆಗಿನ ವಿಕಾಸವು ಸೂಚಿಸುತ್ತದೆ. ★

ಇಟ್ಟುಕೊಳ್ಳುವ ಮೂಲಕ ದಿನಕ್ಕೆ ಒಂದು ಗಂಟೆಯಷ್ಟು ಕಡಿಮೆ ಕೆಲಸ ಮಾಡಿ ಸಂಸ್ಥೆಗೆ ಇನ್ನೂ ಹೆಚ್ಚು ಕಾಣಿಕೆ ಸಲ್ಲಿಸಬಹುದು— ಎನ್ನುವ ಮಾತು ನಿಜವಿರಲೂಬಹುದು. ಈ ಹೇಳಿಕೆಗಳು ಕೆಲಸದ ಕೀಟ ತಲೆಗೇರಿಸಿಕೊಂಡು ತಮ್ಮ ಮುಖ್ಯ ಗುರಿಗಳನ್ನೇ ಮರೆತಂಥವರನ್ನು ಉದ್ದೇಶಿಸಿದ್ದು. ಇಂಥವರ ಸಂಖ್ಯೆ ಕಡಿಮೆಯೇನಿಲ್ಲವಷ್ಟೆ?

"ಕರ್ತವ್ಯಗಳು ವ್ಯವಸ್ಥಾಪಕರನ್ನು ನಿರ್ಬಂಧಿಸುತ್ತವೆ ಮತ್ತು ಉದ್ದೇಶಗಳು ಅವರನ್ನು ಮುಕ್ತಗೊಳಿಸುತ್ತವೆ" ಎಂಬ ಪ್ರೊ|| ರೆಡ್ಡಿನ್‌ರ ನುಡಿಗಳು ಎಷ್ಟು ಅರ್ಥಪೂರ್ಣ!

## ಉದ್ದೇಶಗಳ ಮೇರೆಗೆ ವ್ಯವಸ್ಥಾಪನ

'ಉದ್ದೇಶಗಳ ಮೇರೆಗೆ ವ್ಯವಸ್ಥಾಪನ' (Management by objectives) ಎಂಬ ಪರಿಕಲ್ಪನೆಯನ್ನು ಪೀಟರ್ ಡ್ರಕರ್ ಸೂಚಿಸಿದ್ದು, ಜಾರ್ಜ್ ಓಡಿಯೋರ್ನ್ ಅಮೆರಿಕಾದಲ್ಲೂ, ಜಾನ್ ಹಂಬಲ್ ಬ್ರಿಟನ್ನಿನಲ್ಲೂ ಅದನ್ನು ಜನಪ್ರಿಯಗೊಳಿಸಿದರು. 'ಉದ್ದೇಶಗಳ ಮೇರೆಗೆ ವ್ಯವಸ್ಥಾಪನ' ಎಂದರೆ—ಸಾಧಿಸಬೇಕೆಂಬ ಮತ್ತು ಸಂಸ್ಥೆಯಲ್ಲಿ ಬೆಳೆಯಬೇಕೆಂಬ ವ್ಯವಸ್ಥಾಪಕನ ವೈಯಕ್ತಿಕ ಉದ್ದೇಶವನ್ನೂ ಲಾಭ ಮತ್ತು ಅಭಿವೃದ್ಧಿ ಹೊಂದಬೇಕೆಂಬ ಸಂಸ್ಥೆಯ ಉದ್ದೇಶವನ್ನೂ ಒಂದು ಗೂಡಿಸುವ ಒಂದು ಕ್ರಿಯಾಶೀಲ ವ್ಯವಸ್ಥಾಪನ ಪದ್ಧತಿ.

ಜಾನ್ ಹಂಬಲ್‌ನ ಈ ವ್ಯಾಖ್ಯೆಯನ್ನು ವಿವರಿಸುವುದಾದರೆ:

ಉದ್ದೇಶಗಳ ಮೇರೆಗೆ ವ್ಯವಸ್ಥಾಪನ (ಉ.ಮೇ.ವ್ಯ.) ಒಂದು ವ್ಯವಸ್ಥಾಪನ ಪದ್ಧತಿ.

ಸಾಧಿಸುವ ಮತ್ತು ಸಂಸ್ಥೆಯಲ್ಲಿ ಬೆಳೆಯುವ ವ್ಯವಸ್ಥಾಪಕನ ಆಶಯಗಳನ್ನು ಅದು ಗುರುತಿಸುತ್ತದೆ.

ಸಾಂಸ್ಥಿಕ ಉದ್ದೇಶಗಳನ್ನೂ ವ್ಯವಸ್ಥಾಪಕನ ವೈಯಕ್ತಿಕ ಆಶಯಗಳನ್ನೂ ಅದು ಒಂದುಗೂಡಿಸುತ್ತದೆ.

ಈಗ ಜಾರ್ಜ್ ಓಡಿಯೋರ್ನ್ ನೀಡುವ ವ್ಯಾಖ್ಯೆ ನೋಡೋಣ:

ಒಂದು ಸಂಸ್ಥೆಯ ಹಿರಿಯ ಮತ್ತು ಅಧೀನ ವ್ಯವಸ್ಥಾಪಕರು ಜಂಟಿಯಾಗಿ ಅದರ ಸಾಮಾನ್ಯ ಉದ್ದೇಶಗಳನ್ನು ನಿರೂಪಿಸುವ, ಅಧೀನ ವ್ಯವಸ್ಥಾಪಕರಿಂದ ನಿರೀಕ್ಷಿಸುವ ಫಲಗಳನ್ನು ಸ್ಪಷ್ಟಪಡಿಸುವ ಮೂಲಕ ಪ್ರತಿಯೊಬ್ಬನ ಹೊಣೆಗಾರಿಕೆಯ ಮುಖ್ಯ ಕ್ಷೇತ್ರಗಳನ್ನು ನಿರ್ದೇಶಿಸುವ ಮತ್ತು ಈ ಮಾನಗಳನ್ನು, ಘಟಕವನ್ನು ನಿರ್ವಹಿಸುವಲ್ಲಿ ಮತ್ತು ಅದರ ಪ್ರತಿಯೊಬ್ಬ ಸದಸ್ಯನ ಸಾಧನೆಯನ್ನು ನಿರ್ಧರಿಸುವಲ್ಲಿ, ಮಾರ್ಗದರ್ಶಿಕೆಗಳಾಗಿ ಬಳಸುವ ವ್ಯವಸ್ಥೆಯೇ 'ಉದ್ದೇಶಗಳ ಮೇರೆಗೆ ವ್ಯವಸ್ಥಾಪನ'.

ಓಡಿಯೋರ್ನ್‌ರ ಅಭಿಪ್ರಾಯದಲ್ಲಿ ಈ ಮುಂದಿನ ಅಂಶಗಳಿಗೆ ಒತ್ತು ದೊರೆತಿದೆ:

- ಸಾಂಸ್ಥಿಕ ಮತ್ತು ವಿಭಾಗೀಯ ಗುರಿಗಳು ಮೇಲಧಿಕಾರಿ ಮತ್ತು ಅಧೀನರಿಂದ ಜಂಟಿಯಾಗಿ ರೂಪಿಸಲ್ಪಡುತ್ತವೆ.
- ಮೇಲಧಿಕಾರಿ ಮತ್ತು ಅಧೀನ ಅಧಿಕಾರಿ ಒಟ್ಟಾಗಿ ಕುಳಿತು ಅಧೀನ ಅಧಿಕಾರಿಗೆ ಗುರಿಗಳನ್ನು ನಿರ್ಧರಿಸುತ್ತಾರೆ. ಹೀಗೆ ಉದ್ದೇಶಗಳ ನಿರ್ಣಯದಲ್ಲಿ ಪಾಲ್ಗೊಳ್ಳುವಿಕೆ ಇರುತ್ತದೆ—ಮೇಲಿಂದ ಹೇರಿಕೆ ಅಲ್ಲ.
- ಈ ಉದ್ದೇಶಗಳನ್ನೇ ಮುಂದೆ ಸಾಧನೆಯ ಮೌಲ್ಯಾಂಕನ ಮಾಡುವಲ್ಲಿ ಬಳಸಿಕೊಳ್ಳಲಾಗುವುದು. ಆದ್ದರಿಂದ ಸಾಧನೆಯ ನಿರ್ಧಾರಣ ಹೆಚ್ಚು ವಸ್ತುನಿಷ್ಠವಾಗಿರುತ್ತದೆ.

ಜಾನ್ ಹಂಬಲ್‌ನ ವ್ಯಾಖ್ಯೆಯಲ್ಲಿ ಈ ಪರಿಕಲ್ಪನೆಯ ತಾತ್ತ್ವಿಕ ಭಾಗ ಸ್ಪಷ್ಟಗೊಂಡರೆ, ಓಡಿಯೋರ್ನನ ವಿವರಣೆಯಲ್ಲಿ ವ್ಯವಸ್ಥಾಪನ ಪದ್ಧತಿಯ ಕಾರ್ಯವಿಧಾನ ವ್ಯಕ್ತಗೊಂಡಿದೆ.

ಬ್ಯಾಂಕ್ ಶಾಖೆಯೊಂದರ ಉದಾಹರಣೆ ತೆಗೆದುಕೊಂಡು ಉ.ಮೇ.ವ್ಯ.ದ (MBO) ಪರಿಕಲ್ಪನೆಯನ್ನು ಅರಿಯಲು ಯತ್ನಿಸಬಹುದು. ಶಾಖೆಯ ಎಲ್ಲ ಆಗುಹೋಗುಗಳಿಗೆ ಜವಾಬಾರನಾಗಿರುವವನು ಶಾಖಾ ವ್ಯವಸ್ಥಾಪಕ. ಈತನ ಮೇಲಧಿಕಾರಿ ಒಬ್ಬ ಪ್ರಾದೇಶಿಕ ವ್ಯವಸ್ಥಾಪಕ ಎಂದಿಟ್ಟುಕೊಳ್ಳೋಣ. ಪ್ರಾದೇಶಿಕ ವ್ಯವಸ್ಥಾಪಕ (ಮೇಲಧಿಕಾರಿ) ಮತ್ತು ಶಾಖಾ ವ್ಯವಸ್ಥಾಪಕ (ಅಧೀನ ಅಧಿಕಾರಿ) ಒಂದೆಡೆ ಸೇರುತ್ತಾರೆ. ಶಾಖೆಯು ಒಂದು ವರ್ಷದ ಅವಧಿಯಲ್ಲಿ ಸಾಧಿಸಬೇಕಾದ ಮುಖ್ಯ ಗುರಿಗಳನ್ನು ತಕ್ಕ ಪೂರ್ವಸಿದ್ಧತೆಯೊಂದಿಗೆ ಬಂದಿರುವ ಶಾಖಾ ವ್ಯವಸ್ಥಾಪಕ ಪಟ್ಟಿಮಾಡುತ್ತಾನೆ, ತನ್ನ ಮುಖ್ಯ ಕಾರ್ಯಕ್ಷೇತ್ರಗಳನ್ನು ಮೊದಲು ಗುರುತು ಹಾಕಿ ಒಂದೊಂದು ಕಾರ್ಯಕ್ಷೇತ್ರದ ವಿಷಯದಲ್ಲೂ ತಾನು ಸಾಧಿಸಬೇಕೆಂದಿರುವ ಗುರಿಗಳನ್ನು ಅಂಶ ಅಂಶವಾಗಿ ನಿರ್ದಿಷ್ಟಪಡಿಸುತ್ತಾನೆ. ಈ ಒಂದೊಂದು ಅಂಶಕ್ಕೂ ಕಾಲಮಿತಿಯನ್ನೂ ಹಾಕಿಕೊಳ್ಳುವುದಲ್ಲದೆ ಈ ಗುರಿಯ ಸಾಧನೆಯನ್ನು ಅಳೆಯುವ ಮಾನಗಳನ್ನು ಸ್ಪಷ್ಟಪಡಿಸುತ್ತಾನೆ. **ಉದಾಹರಣೆಗೆ:**

[ವಿವರಕ್ಕೆ 22ನೇ ಪುಟ ನೋಡಿ]

ಪು. 22ರ ಉದಾಹರಣೆಯಲ್ಲಿ ಮುಖ್ಯ ಕಾರ್ಯಕ್ಷೇತ್ರಗಳನ್ನು ಗುರುತಿಸಲಾಗಿರುವುದನ್ನೂ, ಆ ಕಾರ್ಯಕ್ಷೇತ್ರದಲ್ಲಿ ಮಾಡಬೇಕೆಂದಿರುವ ಚಟುವಟಿಕೆಯನ್ನು ನಿರ್ದೇಶಪಡಿಸಿರುವುದನ್ನೂ ಒಂದೊಂದಕ್ಕೂ ನಿರ್ದಿಷ್ಟ ಮಾನದಂಡವನ್ನೂ, ಸಾಧಿಸಲು ಕಾಲಮಿತಿಯನ್ನೂ ಸ್ಪಷ್ಟಪಡಿಸಿರುವುದನ್ನೂ ಗಮನಿಸಬಹುದು.

ಇದು ಒಂದು ಭಾಗವಾದರೆ, ಇನ್ನು ಉಳಿದದ್ದು ಹಿರಿಯ ಅಧಿಕಾರಿಯಾದ ಪ್ರಾದೇಶಿಕ ವ್ಯವಸ್ಥಾಪಕರ ಪಾತ್ರ. ಆತ ಶಾಖಾ ವ್ಯವಸ್ಥಾಪಕ ತಯಾರಿಸಿದ ಪಟ್ಟಿಯನ್ನು ನೋಡಿ ಆ ಶಾಖೆಗೆ ಸಂಬಂಧಿಸಿದಂತೆ ಈ ಕಾರ್ಯಕ್ಷೇತ್ರಗಳ ಪ್ರಾಧಾನ್ಯವನ್ನೂ, ಚಟುವಟಿಕೆಗಳ ಅರ್ಥಪೂರ್ಣತೆಯನ್ನೂ ಮಾನದಂಡಗಳ ನಿರ್ದುಷ್ಟತೆಯನ್ನೂ ಕಾಲಮಿತಿಗಳನ್ನೂ ಸೂಕ್ಷ್ಮವಾಗಿ ಪರಿಶೀಲಿಸುತ್ತಾನೆ. ಗುರಿಗಳು ತೀರ ಕೆಳಮಟ್ಟದ್ದಾಗಿದ್ದಲ್ಲಿ ಅವನ್ನು ಏರಿಸುವ, ಅಥವಾ ಕೆಲಸ ಚುರುಕುಗೊಳಿಸಲು ಕಾಲಮಿತಿಯನ್ನು ಕಡಿಮೆಗೊಳಿಸುವ ಅಥವಾ ಇನ್ನೂ ಕೆಲವು ಚಟುವಟಿಕೆಗಳನ್ನು ಸೇರಿಸುವ ಕಾರ್ಯವನ್ನು ಹಿರಿಯ ಅಧಿಕಾರಿ ಮಾಡುತ್ತಾನೆ. ಬ್ಯಾಂಕಿನ ಒಟ್ಟಾರೆ ನಿರೀಕ್ಷೆಗಳ ಬೆಳಕಿನಲ್ಲಿ ಶಾಖಾ ವ್ಯವಸ್ಥಾಪಕನಿಗೆ ಉದ್ದೇಶಗಳ ನಿರ್ಧಾರಣದಲ್ಲಿ ಮಾರ್ಗದರ್ಶನ ನೀಡುತ್ತಾನೆ.

ಇನ್ನು ಮೂರನೆಯ ಮತ್ತು ಕೊನೆಯ ಭಾಗ: ಈ ಚಟುವಟಿಕೆಗಳನ್ನು ಕುರಿತು ವರದಿ ಮಾಡುವ ವಿಧಾನ ಮತ್ತು ಸಮಯವನ್ನು ಪರಸ್ಪರ ಚರ್ಚಿಸಿ ನಿರ್ಧರಿಸಲಾಗುತ್ತದೆ. ಉದ್ದೇಶಿತ ಗುರಿಗಳನ್ನು ಈಡೇರಿಸುವಲ್ಲಿ ಶಾಖಾ ವ್ಯವಸ್ಥಾಪಕನಿಗೆ ಮೇಲಧಿಕಾರಿಯಿಂದ ಅಗತ್ಯವಾಗುವ ನೆರವನ್ನು ಕುರಿತು ಚರ್ಚಿಸಿ ಒಂದು ನಿರ್ಣಯಕ್ಕೆ ಬಂದು ಅದನ್ನೂ ಆಯಾ ಅಂಶಗಳ ಎದುರು ದಾಖಲು ಮಾಡಲಾಗುತ್ತದೆ.

ಹೀಗೆ ತಯಾರಾದ ಪಟ್ಟಿಯನ್ನು 'ನಿರ್ಧಾರಿತ' (assessee–ಇಲ್ಲಿ ಶಾಖಾ ವ್ಯವಸ್ಥಾಪಕ) ಮತ್ತು ನಿರ್ಧಾರಕ (ಇಲ್ಲಿ ಪ್ರಾದೇಶಿಕ ವ್ಯವಸ್ಥಾಪಕ) ಇಬ್ಬರೂ ಸಹಿ ಹಾಕಿ ತಲಾ ಒಂದೊಂದು ಪ್ರತಿಯನ್ನು ದಾಖಲೆಗಾಗಿ ಉಳಿಸಿಕೊಳ್ಳುತ್ತಾರೆ. ಸಾಮಾನ್ಯವಾದ ಉದ್ದೇಶಗಳು, ಸಮಸ್ಯಾ ಪರಿಹಾರ ಮತ್ತು ನವೋನ್ಮೇಷಶಾಲಿ ಉದ್ದೇಶಗಳು ಹೀಗೆ ಮೂರು ರೀತಿಯ ಉದ್ದೇಶಗಳನ್ನು ಹೊಂದಿರಬೇಕಲ್ಲದೆ, ಒಂದೊಂದು ಉದ್ದೇಶಕ್ಕೂ ಮೂರು ರೀತಿಯ ಗುರಿಗಳನ್ನು ಗೊತ್ತುಪಡಿಸಬೇಕೆಂಬುದು ಆದರ್ಶ ಪದ್ಧತಿ (ಉದಾ: ಕನಿಷ್ಠ ಮಟ್ಟದ ಸಾಧನೆ ಇಂತಿಷ್ಟು, ವಾಸ್ತವಿಕ ಮಟ್ಟದ ಸಾಧನೆ ಇಂತಿಷ್ಟು, ಆದರ್ಶ ಮಟ್ಟದ ಸಾಧನೆ ಇಂತಿಷ್ಟು—ಎಂದು) ಮೌಲ್ಯಾಂಕನ ಮಾಡಲು ಇಲ್ಲಿ ಹೆಚ್ಚಿನ ಮಾಹಿತಿ ಲಭ್ಯವಾಗುವ ಸಾಧ್ಯತೆ ಇದೆಯಾದರೂ ವ್ಯಾವಹಾರಿಕವಾಗಿ ಇದು ಸುಲಭವಾಗದಿರಬಹುದು.

## ಅನುಕೂಲಗಳು

ಈ ವ್ಯವಸ್ಥಾಪನ ಪದ್ಧತಿಯಲ್ಲಿ ಗುರಿಗಳು ಹೆಚ್ಚು ಸ್ಪಷ್ಟವಾಗುವುದರಿಂದ ಒಂದು ನಿಟ್ಟಿನಲ್ಲಿ ಕೆಲಸಮಾಡಲು ಸುಲಭವಾಗುತ್ತದೆ. ಉದ್ದೇಶ

| ಮುಖ್ಯ ಕಾರ್ಯಕ್ಷೇತ್ರ | ಉದ್ದೇಶಿತ ಚಟುವಟಿಕೆ | ಮಾನದಂಡ | ಕಾಲಮಿತಿ |
|---|---|---|---|
| (ಅ) ಉದರಿ ಉಸ್ತುವಾರಿ | 1 ಪುನರ್ವಿಮರ್ಶೆ ಬಾಕಿ ಇರುವ ಘಟಕಗಳ ನಗದು ಉದರಿ ಮಿತಿಗಳ ನವೀಕರಣ/ಏರಿಕೆ. | 12 ಉದ್ಯಮ ಘಟಕಗಳು | 30- 9-90 → 6<br>31-12-90 → 6 |
| | 2 ಎಲ್ಲ ಕಟಬಾಕಿ ಸಾಲಗಳ ಮರು ಪರಿಶೀಲನೆ ಮತ್ತು ವಸೂಲಾತಿ ಸಾಧ್ಯವಿಲ್ಲದ ಖಾತೆಗಳ ಸಂಬಂಧದಲ್ಲಿ ಕರಡು ಋಣ ಖಾತೆಗೆ ವರ್ಗಾವಣೆಗೆ ಶಿಫಾರಸು ಮತ್ತು ವರ್ಗಾವಣೆ. | 200 ಖಾತೆಗಳು | 31-10-90 |
| | 3 ವಸೂಲಾತಿ ಸಾಧ್ಯವಿಲ್ಲದ ಕರಡುಸಾಲಗಳ ಸಂಬಂಧದ ಉದರಿ ವಿಮೆ ಕ್ಲೇಮುಗಳ ಸಲ್ಲಿಕೆ. | 400 ಖಾತೆಗಳು | 30-11-90 |
| (ಆ) ದಕ್ಷತೆಯನ್ನು ಉತ್ತಮಪಡಿಸುವಿಕೆ | ಕಳೆದ ಕೇಂದ್ರ ಕಛೇರಿ ತಪಾಸಕರ ವರದಿಯಲ್ಲಿ ತೋರಿಸಲಾದ ಎಲ್ಲ ತಪ್ಪುಗಳ ನೇರ್ಪಡಿಸುವಿಕೆ. | ಶಾಖೆಯ ದಕ್ಷತೆಯ ದರ್ಜೆಯನ್ನು ಕನಿಷ್ಠ ಒಂದು ಮಟ್ಟದಷ್ಟು ಏರಿಸುವುದು | ಮುಂದಿನ ತಪಾಸಣೆ ಅವಧಿ |
| (ಇ) ಗ್ರಾಹಕ ಸಂಬಂಧಗಳು | 1 ವಕೀಲರು, ವೈದ್ಯರು ಮುಂತಾದ ವಿಶಿಷ್ಟ ವರ್ಗಗಳ ಗ್ರಾಹಕರ ವಿಶೇಷ ಸಭೆ ಕರೆದು ಅವರಿಗೆ ಬ್ಯಾಂಕಿನ ಕಾರ್ಯಕ್ರಮಗಳ ಪರಿಚಯ ನೀಡುವುದು. | 3 ಸಭೆಗಳು | 31-3-91 |
| | 2 ಶಾಖೆಯಲ್ಲಿ ಗ್ರಾಹಕ ಕೌನ್ಸಿಲ್ ಆರಂಭಿಸುವುದು ಮತ್ತು ಸಭೆ ನಡೆಸುವುದು. | 3 ಸಭೆಗಳು | 30-11-90 |

ಗಳನ್ನೂ ಗುರಿಗಳನ್ನೂ ನಿರ್ದಿಷ್ಟಪಡಿಸುವಲ್ಲಿ ತನ್ನ ಪಾತ್ರವೂ ಇರುವುದರಿಂದ ಅಧೀನ ಅಧಿಕಾರಿಗೆ ಚಟುವಟಿಕೆಗಳಲ್ಲಿ ಸಹಜವಾಗಿ ಹೆಚ್ಚಿನ ಆಸಕ್ತಿ ಮೂಡುತ್ತದೆ. ಕಾಲಮಿತಿಗಳು ಆದ್ಯತೆಯನ್ನು ಗುರುತಿಸುವಲ್ಲಿ ನೆರವಾಗುತ್ತವೆ. ಗುರಿಗಳು ಸ್ಪಷ್ಟವಾಗಿರುವುದರಿಂದ ಮತ್ತು ಸಾಧನೆಯ ಮಾನದಂಡವನ್ನು ಮೊದಲೇ ನಿರ್ಧರಿಸಿರುವುದರಿಂದ ಸಾಧನೆಯ ಅಳತೆಯಲ್ಲಿ ವ್ಯಕ್ತಿನಿಷ್ಠತೆ ಅಳಿದು ವಸ್ತುನಿಷ್ಠತೆ ಸಾಧ್ಯವಾಗುತ್ತದೆ.

ಮೇಲಧಿಕಾರಿಯ ದೃಷ್ಟಿಯಿಂದ ಅಧೀನ ಅಧಿಕಾರಿಯನ್ನು ಸರಿಯಾದ ದಿಶೆಯಲ್ಲಿ ಕಾರ್ಯೋನ್ಮುಖನಾಗುವಂತೆ ಚೋದಿಸಿದಂತಾಯಿತು: ಅಧೀನ ಅಧಿಕಾರಿಯೊಂದಿಗೆ ಚರ್ಚಿಸಿ ಗುರಿಗಳನ್ನು ನಿರ್ಧರಿಸಿರುವುದರಿಂದ ಗುರಿಗಳು ಹೆಚ್ಚು ಅರ್ಥಪೂರ್ಣವೂ ಅವುಗಳ ಸಾಧನೆಯು ಹೆಚ್ಚು ಸಂಭವನೀಯವೂ ಆಗಿರುತ್ತವೆ. ಕಾಲಕಾಲಕ್ಕೆ ಬರುವ ಪರಿಶೀಲನಾ ವರದಿಗಳಿಂದ ಪ್ರಗತಿಯ ಸೂಚನೆ ಸಿಕ್ಕುವುದಲ್ಲದೆ ಅವಧಿಯ ಕೊನೆಯಲ್ಲಿ ಮುನ್ನಡೆಯ ಖಚಿತ ನೋಟ ಲಭ್ಯವಾಗುತ್ತದೆ.

ಈ ವ್ಯವಸ್ಥಾಪನ ಪದ್ಧತಿಯ ಮೊದಲ ಭಾಗವನ್ನು ಮಾತ್ರ ಗಮನಿಸುವವರು ಇದನ್ನು ಯೋಜನೆಯ ಒಂದು ಭಾಗವೆಂದೋ, ಕೊನೆಯ ಭಾಗವನ್ನು ಮಾತ್ರ ಗಮನಿಸುವವರು ಇದೊಂದು ಸಾಧನಾ ನಿರ್ಣಯ ಪದ್ಧತಿಯೆಂದೋ ತಪ್ಪಾಗಿ ಭಾವಿಸುವ ಅಪಾಯವುಂಟು. ಇತರರಿಗೆ ಇದೊಂದು ವರದಿಮಾಡುವ ವಿಧಾನವಾಗಿಯೋ ಪ್ರಚೋದಿಸುವ ಅಂಶವಾಗಿಯೋ ಕಾಣಲು ಸಾಧ್ಯ. ಇದು ಅಂಧರು ಆನೆಯನ್ನು ಅರ್ಥೈಸಿಕೊಂಡ ಕಥೆಯಂತೆ. ಒಟ್ಟಿನಲ್ಲಿ ಉದ್ದೇಶಗಳ ಮೇರೆಗೆ ವ್ಯವಸ್ಥಾಪನ ಒಂದು ಪರಿಣಾಮಕಾರಿ ವ್ಯವಸ್ಥಾಪನ ಪದ್ಧತಿ-ಎಂಬುದು ವಾಸ್ತವ ಸಂಗತಿ.

## ಬ್ಯಾಂಕುಗಳಲ್ಲಿ

ಆಧುನಿಕ ವ್ಯವಸ್ಥಾಪನ ಪದ್ಧತಿಗಳನ್ನು ಅಳವಡಿಸಿಕೊಳ್ಳಲು ಯತ್ನಿಸುತ್ತಿರುವ ಭಾರತೀಯ ಸ್ಟೇಟ್ ಬ್ಯಾಂಕು 'ಮುಖ್ಯ ಸಾಧನೆಯ ಕ್ಷೇತ್ರಗಳು' ಅಥವಾ 'Key Performance Areas' ಪದ್ಧತಿಯನ್ನು 1986ರಿಂದ ಆಂಶಿಕವಾಗಿ ಜಾರಿಗೆ ತಂದಿದೆ. ಹೆಚ್ಚು ಕಡಿಮೆ ಇದು MBO ಅಥವಾ ಉದ್ದೇಶಗಳ ಮೇರೆಗೆ ವ್ಯವಸ್ಥಾಪನದ ಪ್ರತಿರೂಪವೇ ಆಗಿದೆ ಎನ್ನಬಹುದು.

MBO ಎಲ್ಲ ರೀತಿಯ ಸಿಬ್ಬಂದಿಗೂ ಅನ್ವಯಿಸಬಹುದಾದರೂ ಮಾನದಂಡಗಳನ್ನು ನಿರ್ದಿಷ್ಟಪಡಿಸುವ ಮತ್ತಿತರ ಸಮಸ್ಯೆಗಳಿಂದಾಗಿ ಶಾಖಾ ವ್ಯವಸ್ಥಾಪಕರು, ಶಾಖೆಯ ವಿಭಾಗ ಮುಖ್ಯಸ್ಥರು ಮತ್ತು ವಲಯ ಹಾಗೂ ಕೇಂದ್ರ ಕಛೇರಿಗಳಲ್ಲಿನ ವಿಭಾಗ ಮುಖ್ಯಸ್ಥರಿಗೆ ಮಾತ್ರ ಸದ್ಯಕ್ಕೆ ಈ ಪದ್ಧತಿಯನ್ನು ಅನ್ವಯಿಸಲಾಗಿದೆ. ಬ್ಯಾಂಕ್ ಶಾಖೆಗಳ ಮುಖ್ಯ ಕಾರ್ಯಕ್ಷೇತ್ರಗಳು ಮತ್ತು ನಿರ್ದಿಷ್ಟ ಚಟುವಟಿಕೆಗಳಲ್ಲಿ ಕೆಲವು ಹೀಗಿರಬಹುದು:

[ವಿವರಕ್ಕೆ 23ನೇ ಪುಟ ನೋಡಿ]

ಭಾರತೀಯ ಸ್ಟೇಟ್ ಬ್ಯಾಂಕಿನಲ್ಲಿ ಜಾರಿಯಲ್ಲಿರುವಂತೆ ಈ ಪದ್ಧತಿಯಲ್ಲಿನ ಗುಣದೋಷಗಳನ್ನು ಸ್ಥೂಲವಾಗಿ ಚರ್ಚಿಸಬಹುದು. ಹೆಚ್ಚುತ್ತಿರುವ ಕೆಲಸದ ಹೊರೆ, ಮಿತಿಮೀರಿದ ಮಾಹಿತಿಯ ಪ್ರವಾಹ ಮತ್ತು ವಿವಿಧ ರೀತಿಯ ಒತ್ತಡಗಳಿಗೆ ಸಿಕ್ಕು ನರಳುತ್ತಿರುವ ಶಾಖಾ ವ್ಯವಸ್ಥಾಪಕರಿಗೆ ಈ ಪದ್ಧತಿ ಅವರ ಮುಖ್ಯ ಕಾರ್ಯಕ್ಷೇತ್ರಗಳನ್ನು ಬೆಟ್ಟು ಮಾಡುವುದರಿಂದ ವ್ಯವಸ್ಥಾಪನದಲ್ಲಿದ್ದ ಗೊಂದಲ ಕೊಂಚ ಮಟ್ಟಿಗೆ ಕಡಿಮೆಯಾಗಿದೆ.

ಮೇಲಿನವರು ತನ್ನಿಂದ ಏನು ನಿರೀಕ್ಷಿಸುತ್ತಾರೆಂಬುದು ಮೊದಲೇ ಸ್ಪಷ್ಟವಾಗುವುದರಿಂದ ಕಿರಿಯ ದರ್ಜೆ ವ್ಯವಸ್ಥಾಪಕರ ಆತಂಕವೂ ಸ್ವಲ್ಪ ನಿವಾರಣೆಯಾಗಿದೆ ಎನ್ನಬಹುದು.

ಸಾಧನೆಯ ನಿರ್ಣಯ ಬಹುತೇಕವಾಗಿ ಮೇಲಧಿಕಾರಿಗಳ ಅಭಿಪ್ರಾಯಗಳಿಂದಲೇ ಪ್ರೇರಿತವಾಗುತ್ತಿದ್ದ ಹಿಂದಿನ ಪದ್ಧತಿ ಹೋಗಿ ತನ್ನನ್ನೂ ವಿಶ್ವಾಸಕ್ಕೆ ತೆಗೆದುಕೊಂಡು ನಿರ್ಧರಿಸಿದ ಗುರಿಗಳ ಬೆಳಕಿನಲ್ಲಿ ತನ್ನ ಸಾಧನೆಯನ್ನು ಪರಸ್ಪರರಿಗೆ ಮೊದಲೇ ಒಪ್ಪಿಗೆಯಾದ ಖಚಿತ ಮಾನದಂಡಗಳಿಂದ ಅಳೆಯುವ ಈ ಪದ್ಧತಿ ವ್ಯವಸ್ಥಾಪಕರ ದೃಷ್ಟಿಯಿಂದ ಸ್ವಾಗತಾರ್ಹವಾಗಿದೆ. ಸಾಧನೆಗಳನ್ನು ಅಳೆಯುವಾಗ ಮತ್ತೆ ಅದೇ ಕಕ್ಷಿಗಳ ನಡುವೆ ಮಾತುಕತೆ ನಡೆದು ನಿರ್ಧಾರಿತನು (assessee) ತನ್ನನ್ನು ತಾನೇ ವಿಶ್ಲೇಷಿಸಿಕೊಳ್ಳಲು ಅವಕಾಶ ಮಾಡಿಕೊಡಲಾಗುತ್ತದೆ. ಅದರ ಆಧಾರದ ಮೇಲೆ ನಿರ್ಧಾರಕರು ತಮ್ಮ ಅಭಿಪ್ರಾಯ ದಾಖಲಿಸುತ್ತಾರೆ. ಈ ಪದ್ಧತಿ

| ಕಾರ್ಯಕ್ಷೇತ್ರ | | ಚಟುವಟಿಕೆ |
|---|---|---|
| ಉಪರಿ ಉಸ್ತುವಾರಿ | 1 | ವಸೂಲಾತಿ ಶಿಬಿರಗಳನ್ನು ಏರ್ಪಡಿಸುವುದು |
| | 2 | ಬೇಡಿಕೆ ವಸೂಲಾತಿ ಅನುಪಾತವನ್ನು ಏರಿಸುವುದು |
| | 3 | ದೊಡ್ಡ ಕರಡು ಸಾಲಗಳ ಸಂಬಂಧದಲ್ಲಿ ದಾವೆ ಹಾಕುವುದು...ಇತ್ಯಾದಿ |
| ವ್ಯವಹಾರ ವೃದ್ಧಿ | 1 | ಕನಿಷ್ಠ 5,000 ರೂ ಗಳ ಕನಿಷ್ಠ 1 ವರ್ಷ ಅವಧಿಯ ಹೊಸ ಸ್ಥಿರ ಠೇವಣಿಗಳನ್ನು ಸಂಗ್ರಹಿಸುವುದು |
| | 2 | ಠೇವಣಿ ಸಂಗ್ರಹಣಾ ಸಪ್ತಾಹಗಳನ್ನು ಏರ್ಪಡಿಸುವುದು |
| | 3 | ದೊಡ್ಡ ಮೊತ್ತದ ಹೊಸ ಕೈಗಾರಿಕಾ ಸಾಲಗಳನ್ನು (ಕನಿಷ್ಠ 1ಲಕ್ಷ ರೂ.) ನೀಡುವುದು ಇತ್ಯಾದಿ |
| ಸಿಬ್ಬಂದಿಯೊಡನೆ ಸಂಬಂಧ (ಅದು ಗಾಸಿಗೊಂಡಿದ್ದರೆ) | 1 | ಸಿಬ್ಬಂದಿಯೊಡನೆ ಮುಕ್ತ ಚರ್ಚೆಗಳನ್ನು ಏರ್ಪಡಿಸುವುದು |
| | 2 | ವರ್ತನ ವಿಜ್ಞಾನ ತಜ್ಞರ ನೆರವಿನಿಂದ ಯಥೋಚಿತವಾದ ಕಾರ್ಯಕ್ರಮ ರೂಪಿಸಿ ನಡೆಸುವುದು |
| ಮನೆವಾರ್ತೆ | 1 | 3 ವರ್ಷದಿಂದ ಬಾಕಿ ಇರುವ ಸ್ಥಿರ ಠೇವಣಿ/ಜನತಾ ಠೇವಣಿ ಖಾತೆಯ ಲೆಕ್ಕಗಳನ್ನು ಸಂತುಲನಗೊಳಿಸುವುದು. |
| | 2 | ಕೆಲವು ನಿರ್ದಿಷ್ಟ ಪುಸ್ತಕಗಳನ್ನು ಆರಂಭಿಸುವುದು |
| | 3 | ಅನುಮಾನಲೆಕ್ಕ, ವಿವಿಧ ಠೇವಣಿ ಖಾತೆ, ಬ್ಯಾಂಕರರ ಚೆಕ್ಕುಗಳ ಖಾತೆ ಇವುಗಳಲ್ಲಿನ ದೀರ್ಘಕಾಲದ ನಮೂದುಗಳನ್ನು ತೊಡೆದುಹಾಕುವುದು |
| ಶಾಖಾ ಸ್ವರೂಪ ವಿಕಸನ (Image Building) | 1 | ಗ್ರಾಮ ನೈರ್ಮಲ್ಯ ಕಾರ್ಯಕ್ರಮ ಏರ್ಪಡಿಸುವುದು |
| | 2 | ಪಶು ಆರೋಗ್ಯ ತಪಾಸಣಾ ಶಿಬಿರ ಏರ್ಪಡಿಸುವುದು |
| | 3 | ರಕ್ತದಾನ ಶಿಬಿರ ಏರ್ಪಡಿಸುವುದು ಇತ್ಯಾದಿ |

ಸಂಸ್ಥೆಯಲ್ಲಿ ಬಲಗೊಂಡಂತೆ ಸಾಧನೆಗಳ ಅಳತೆಯಲ್ಲಿ ಬಹುಮಟ್ಟಿನ ವಸ್ತುನಿಷ್ಠತೆ, ನಿರ್ದಿಷ್ಟತೆಗಳು ಮೂಡುವ ಭರವಸೆ ಉಂಟಾಗಿದೆ.

ಈ ಪದ್ಧತಿಯನ್ನು ಹೊಸದಾಗಿ ಜಾರಿಗೊಳಿಸಿರುವುದರಿಂದ ಇದರ ಅನುಷ್ಠಾನದಲ್ಲಿ ಕೆಲವು ನ್ಯೂನತೆಗಳು ಕಂಡುಬರುವುದು ಸಹಜ. ಅವುಗಳಲ್ಲಿ ಮುಖ್ಯವಾದುವನ್ನು ಕುರಿತು ಇಲ್ಲಿ ಚರ್ಚಿಸಬಹುದು. ಮೊದಲನೆಯ ಕೊರತೆಯೆಂದರೆ ವ್ಯಾಪಕವಾದ ಪ್ರಚಾರದ ಅಭಾವ. ಎಷ್ಟೋ ವ್ಯವಸ್ಥಾಪಕರಿಗೆ ಈ ವ್ಯವಸ್ಥೆಯ ಅಸ್ತಿತ್ವದ ಅರಿವೇ ಇಲ್ಲದಿರುವುದು ಶೋಚನೀಯ. ಅರಿವಿದ್ದವರಿಗೂ ಈ ಪದ್ಧತಿಯನ್ನು ಕುರಿತ ಪೂರ್ಣ ವಿವರಗಳು ತಿಳಿಯದೆ ಪೂರ್ವಾಗ್ರಹ ಪೀಡಿತರಾಗಿರುವ ಸಂಭವವೂ ಇಲ್ಲದಿಲ್ಲ.

ಗುರಿಗಳನ್ನು ನಿರ್ಧರಿಸುವ ಕಾರ್ಯ ಜಂಟಿಯಾಗಿ ನಡೆಯಬೇಕಷ್ಟೆ? ಅನೇಕಬಾರಿ ಮೇಲಧಿಕಾರಿಯ ಅಭಿಮತವಷ್ಟೆ ಮಹತ್ವ ಪಡೆಯುವುದನ್ನು ಕಾಣುತ್ತೇವೆ. ಮೇಲಧಿಕಾರಿಯು ಗುರಿಗಳನ್ನು ಕೊಂಚಮಟ್ಟಿಗೆ ಹಿಗ್ಗಿಸಬಹುದೆಂಬುದೇನೋ ಸರಿಯೇ. ಆದರೆ, ಇದಕ್ಕೆ ಅಧೀನ ಅಧಿಕಾರಿಯೂ ಸಮ್ಮತಿಸಬೇಕು. ನಿರ್ದೇಶಿತ ಗುರಿಗಳನ್ನು ಗೊತ್ತಾದ ಅವಧಿಯೊಳಗೆ ಈಡೇರಿಸಬೇಕೆಂಬ ಈ ದಾಖಲೆ ಒಂದು ಕರಾರಿನಂತೆ. ಇಲ್ಲಿ ಅಧೀನನು ಸಮಾನ ಪಾಲುದಾರನಾಗದಿದ್ದರೆ ಈ ಈ ಕರಾರು ಅರ್ಥಹೀನವಾದೀತು. ಅಧೀನ ಅಧಿಕಾರಿಗೆ ತನ್ನ ಪಾತ್ರದ ಸ್ಪಷ್ಟ ಅರಿವು ಇಲ್ಲದಿದ್ದಾಗ ಅನ್ಯಮಾರ್ಗವಿಲ್ಲ. ಆದರೆ ಎಲ್ಲ ವ್ಯವಸ್ಥಾಪಕರಿಗೂ ತಂತಮ್ಮ ಕಾರ್ಯೋದ್ದೇಶಗಳ ನಿಕಟ ಪರಿಚಯ ಮಾಡಿಕೊಟ್ಟ ಅನಂತರವೇ 'ಮುಖ್ಯ ಸಾಧನೆಯ ಕ್ಷೇತ್ರ'ದ ಕಸರತ್ತು ಆರಂಭವಾಗಬೇಕಾಗುತ್ತದೆ.

ಒಮ್ಮೊಮ್ಮೆ ಸಾಕಷ್ಟು ಮುನ್ಸೂಚನೆ ಇಲ್ಲದೆ ಸಾಧನಾಕ್ಷೇತ್ರಗಳನ್ನೂ ಗುರಿಗಳನ್ನೂ ಇತ್ಯರ್ಥ ಮಾಡಲು ವ್ಯವಸ್ಥಾಪಕರನ್ನು ಕರೆಯುವುದುಂಟು. ಕೇವಲ ಸುತ್ತೋಲೆಯನ್ನು ಮೊದಲೇ ಕಳಿಸಿಬಿಟ್ಟರೆ ಮುಗಿಯಲಿಲ್ಲ. ವ್ಯವಸ್ಥಾಪಕರಿಗೆ ತಮ್ಮ ಗುರಿಗಳನ್ನು ಯೋಜಿಸಲು ಸ್ವಲ್ಪ ಕಾಲಾವಕಾಶ ನೀಡಬೇಕು.

ಗುರಿಗಳು ಹೆಚ್ಚು ಕಡಿಮೆ ಎಲ್ಲ ಶಾಖೆಗಳಿಗೂ ಒಂದೇ ರೀತಿಯಾಗಿರುವುದು ಅಪೇಕ್ಷಣೀಯವಲ್ಲ. ಶಾಖೆಯ ಪರಿಸರ, ವ್ಯವಸ್ಥಾಪಕನ ಮನೋಭಾವ (Management by whose objectives? ಯಾರ ಉದ್ದೇಶಗಳಿಗೆ ತಕ್ಕಂತೆ ವ್ಯವಸ್ಥಾಪನ? ಎಂಬ ಮುಖ್ಯ ಪ್ರಶ್ನೆಯೂ ಇದೆ.) ಇವಕ್ಕೂ ತಕ್ಕ ಮಾನ್ಯತೆ ನೀಡಬೇಕು. ಇಲ್ಲದಿದ್ದರೆ ಈ ವ್ಯವಸ್ಥೆ ಸತ್ವಹೀನವಾಗುತ್ತದೆ.

ಮುಖ್ಯವಾದ ಇನ್ನೊಂದು ದೋಷವೆಂದರೆ, ಈ ಕಸರತ್ತು ಆರಂಭವಾಗುವ ವೇಳೆಗೆ ಸಾಧನಾ ನಿರ್ಣಯಕ್ಕೆಂದು ನಿಗದಿತವಾದ ಅವಧಿಯಲ್ಲಿ ಸಾಕಷ್ಟು ಸಮಯ ಕಳೆದುಹೋಗಿರುತ್ತದೆ. ಉದಾ : 1-4-89ರಿಂದ 31-3-90ರ ವರೆಗಿನ ಅವಧಿಯ ಮುಖ್ಯ ಸಾಧನಾ ಕ್ಷೇತ್ರಗಳನ್ನು (Key Performance Areas) 9-9-89ರಂದು ಗುರುತಿಸುವುದಾದರೆ ಹೇಗೆ? ಈ ಕೆಲಸ ನಿಗದಿತ ಅವಧಿಯ ಆರಂಭಕ್ಕೆ ಮುನ್ನವೇ ಆಗಬೇಕು. (ಕಾರಣಗಳೇನೇ ಇರಲಿ, ಹೀಗಾಗುತ್ತಿಲ್ಲ ಎಂಬುದಂತೂ ನಿಜ.) ಮೇಲಿನವರು ಇದಕ್ಕೆ ಆದ್ಯತೆ ನೀಡಿಲ್ಲವೆಂಬುದು ಒಂದು ಕಾರಣವಿರಬಹುದು. ಮಾರ್ಚ್ ತಿಂಗಳಲ್ಲಿ ವಾರ್ಷಿಕ ಲೆಕ್ಕ ಮುಕ್ತಾಯದ ಕೆಲಸಗಳಲ್ಲಿ ವ್ಯವಸ್ಥಾಪಕರು ಮಗ್ನರಾಗುವುದು ಇನ್ನೊಂದು ಕಾರಣ. ಇಂಥಲ್ಲಿ ಅವಧಿಯನ್ನು ಬದಲಾಯಿಸಬಹುದೇ ಎಂದು ನೋಡಬೇಕು.

ಮೇಲಧಿಕಾರಿಗೆ ಅನೇಕ ಬಾರಿ ಘಟಕ ಕುರಿತ ಸ್ಪಷ್ಟ ಕಲ್ಪನೆ ಇಲ್ಲದಿರುವುದರಿಂದ ಗುರಿಗಳ ನಿರ್ಧಾರಣ ಯಾಂತ್ರಿಕವಾಗುವ ಅಪಾಯವನ್ನು ತಳ್ಳಿಹಾಕುವಂತಿಲ್ಲ. ಅಧಿಕಾರಿಗಳ ವರ್ಗಾವಣೆಯೂ ಒಂದು ಸಮಸ್ಯೆಯೇ ಸರಿ. ನಿರ್ಧಾರಣಾ ಅವಧಿ ಮುಗಿಯುವ ಮುನ್ನವೇ ವರ್ಗಾವಣೆಯಾಗುವ ಸಂಭವಗಳೂ ಅಧಿಕವಷ್ಟೆ? ಅಂಥಲ್ಲಿ ಈ ಪ್ರಕ್ರಿಯೆ ಪೂರ್ಣಗೊಳ್ಳುವುದು ಕಷ್ಟ.

ಗುರಿಗಳು ಮತ್ತು ಮಾನದಂಡಗಳನ್ನೇನೋ ನಿರ್ದಿಷ್ಟವಾಗಿ ತಿಳಿಸಲಾಗಿರುತ್ತದೆ. ಆದರೆ ಮರುಪರಿಶೀಲನೆಯ ಸಮಯದಲ್ಲಿ ಸಾಧನೆಯನ್ನು ಅಳೆಯುವಾಗ ಅಧೀನ ಅಧಿಕಾರಿ ಹೇಳಿದ್ದೇ ಸತ್ಯವಾಗಿಬಿಡುವ ಅಪಾಯವಿದೆ. ಮೇಲಧಿಕಾರಿಗೆ ಈ ಕುರಿತ ಸರಿಯಾದ ಕಲ್ಪನೆ ಹಲವು ಸಂದರ್ಭಗಳಲ್ಲಿ ಇರುವುದಿಲ್ಲ. ಹೇಳಿದ ಎಲ್ಲವನ್ನೂ ಪರೀಕ್ಷಿಸಿ ನೋಡುವುದಂತೂ ವ್ಯಾವಹಾರಿಕವಲ್ಲ. ಈ ಮರುಪರಿಶೀಲನೆಯೂ ಅವಧಿ ಮುಗಿದ ಬಹು

ಕಾಲದ ಅನಂತರ ನಡೆಯುವುದರಿಂದ ಅಂಕಿ ಅಂಶಗಳೊಂದಿಗೆ ಸ್ವಲ್ಪ ಚೆಲ್ಲಾಟ ನಡೆಯಲು ಸಾಧ್ಯ. ಮುಖ್ಯವಾಗಿ ಕರಡು ಸಾಲ ಖಾತೆಗಳ ಸಂಖ್ಯೆ, ಠೇವಣಿ ವಿಮೆ ಮತ್ತು ಉತ್ತರಿ ಖಾತರಿ ನಿಗಮದ ಕ್ಲೇಮುಗಳ ಸಂಖ್ಯೆ, ದೊಡ್ಡ ಮೊತ್ತದ ಠೇವಣಿ ಅಥವಾ ಸಾಲಗಳ ಸಂಖ್ಯೆಯ ವಿಷಯದಲ್ಲಿ ಈ ಅಪಾಯ ಅಧಿಕ. ಇದು ನಿವಾರಣೆಯಾಗಬೇಕಾದರೆ ವರದಿ ಮಾಡುವ ಪದ್ಧತಿ ಬಲಗೊಳ್ಳಬೇಕಾದ್ದು ಅಗತ್ಯ.

ವೈಯಕ್ತಿಕ ಆಶಯಗಳನ್ನೂ ಸಾಂಸ್ಥಿಕ ಆಶಯಗಳನ್ನೂ ಒಗ್ಗೂಡಿಸುವುದು ಈ ವಿಧಾನದ ಒಂದು ಮುಖ್ಯತತ್ತ್ವವೆನ್ನುವುದನ್ನು ಮರೆಯುವಂತಿಲ್ಲ. ವ್ಯವಸ್ಥಾಪಕನೊಬ್ಬ ತಾನು ಏನು ಮಾಡಿದರೆ ಚೆನ್ನ ಎಂಬುದರ ಬಗೆಗೆ ತನ್ನದೇ ಆದ ದೃಷ್ಟಿ ಇಟ್ಟುಕೊಂಡಿರಲು ಸಾಧ್ಯ. ಆತನ ಅಗತ್ಯಗಳು, ವೈಯಕ್ತಿಕ ಆಶಯಗಳು ಮತ್ತು ಆತ ತನ್ನನ್ನು ತಾನು ಅಳೆಯುವ ದೃಷ್ಟಿ ಅವನನ್ನು ಪ್ರೇರಿಸುವ ಮೂಲ ಶಕ್ತಿಯಾಗಿದ್ದರೆ ಅವನ ಉದ್ದೇಶಗಳಿಂದಲೇ ಈ ಅಧ್ಯಾಯ ಆರಂಭವಾಗಬೇಕು. ಬ್ಯಾಂಕುಗಳಲ್ಲಿ ಈಗಿರುವ ವ್ಯವಸ್ಥೆಯಲ್ಲಿ ಈ ಅಂಶದತ್ತ ಗಮನ ಹರಿದಿಲ್ಲ.

ದಾಖಲೆಯ ಕೊನೆಯ ಕಲಮು—'ಮೇಲಧಿಕಾರಿಯಿಂದ ನಿರೀಕ್ಷಿಸುವ ಬೆಂಬಲ' ಎಂಬುದು—ಇದು ಖಾಲಿಯಾಗಿರುವ ದಾಖಲೆಗಳೇ ಅಧಿಕ. ಇಲ್ಲಿರುವ ಗುಟ್ಟು ಬೆಂಬಲವನ್ನು ಯಾವ ಅಧೀನ ವ್ಯವಸ್ಥಾಪಕರೂ ನಿರೀಕ್ಷಿಸುವುದಿಲ್ಲ ಎಂಬುದಲ್ಲ ಎಂದು ಸೂಕ್ಷ್ಮಜ್ಞರಿಗೆ ಹೇಳಬೇಕಾಗಿಲ್ಲ. ಸಾಧಾರಣವಾಗಿ ಎಲ್ಲರೂ ಒತ್ತಾಯದಿಂದ ಕೇಳುವುದು ಒಂದಿಲ್ಲೊಂದು ರೀತಿಯ ಸಿಬ್ಬಂದಿ ನೆರವನ್ನು. ಹೆಚ್ಚಿನ ಚರ್ಚೆ ನಡೆದರೂ ಈ ಅಂಶವನ್ನು ಪ್ರತ್ಯೇಕವಾಗಿಯೇ ತೆಗೆದುಗೊಳ್ಳಬೇಕೆಂಬ ಸಲಹೆಯೊಂದಿಗೆ ಈ ಚರ್ಚೆಗೆ ತೆರೆ ಬೀಳುತ್ತದೆ. ಹೆಚ್ಚೆಂದರೆ ಯಾವ ನಿರ್ದಿಷ್ಟ ಗುರಿಸಾಧನೆಗೆ ಸಿಬ್ಬಂದಿ ನೆರವು ಬೇಕೆಂದು ಮೇಲಧಿಕಾರಿಗೆ ಮನವರಿಕೆಯಾಗುವುದೋ ಅದನ್ನು ತೆಗೆದುಹಾಕಿ ಬೇರೊಂದು ಗುರಿಯನ್ನು ಕೊಡಬಹುದು. ಇಲ್ಲಿ ಮೇಲಧಿಕಾರಿಗೂ ಇತಿಮಿತಿಗಳುಂಟೆಂಬುದು ತಿಳಿದ ವಿಷಯ. ಸಾಧನಾ ನಿರ್ಣಯವು (Performance appraisal) ಈ ವ್ಯವಸ್ಥೆಯಲ್ಲಿ ಹೆಚ್ಚು ವಸ್ತುನಿಷ್ಠವಾಗಿರುವುದೆಂಬ ನಿರೀಕ್ಷೆ ಸಹಜವೇ ಆದರೂ ವ್ಯಕ್ತಿನಿಷ್ಠತೆಯ ಆರೋಪವೂ ಇಲ್ಲದಿಲ್ಲ. ಸಾಧನೆಯನ್ನು ಅಳೆಯುವ ಮಾನದಂಡಗಳಾವುವೆಂಬುದನ್ನು ಮೊದಲೇ ಖಚಿತಪಡಿಸಿರುವುದರಿಂದ ಇದು ದೊಡ್ಡ ಸಮಸ್ಯೆಯಾಗಬಾರದು.

ಇಂಥ ಎಲ್ಲ ಕುಂದುಕೊರತೆಗಳಿದ್ದರೂ ಭಾರತೀಯ ಸ್ಟೇಟ್ ಬ್ಯಾಂಕ್ ಮತ್ತು ಅದರ ಸಹವರ್ತಿ ಬ್ಯಾಂಕುಗಳು, ಕೆನರಾ ಬ್ಯಾಂಕ್, ಪಂಜಾಬ್ ನ್ಯಾಷನಲ್ ಬ್ಯಾಂಕ್ ಮತ್ ಇನ್ನಿತರ ಬ್ಯಾಂಕುಗಳು ಒಂದಿಲ್ಲೊಂದು ರೂ ದಲ್ಲಿ ಉದ್ದೇಶಗಳ ಮೇರೆಗೆ ವ್ಯವಸ್ಥಾಪನ ತತ್ತ್ವವನ್ನು ಬಳಸಿಕೊಳ್ಳಲು ಯತ್ನಿಸುತ್ತಿ ಈ ತತ್ತ್ವದ ಅನುಷ್ಠಾನ ವಿಧಾನದಲ್ಲಿ ಬ್ಯಾ ನಿಂದ ಬ್ಯಾಂಕಿಗೆ ಕೊಂಚ ವ್ಯತ್ಯಾಸವಿದ್ದ ಭಾರತೀಯ ಸ್ಟೇಟ್ ಬ್ಯಾಂಕಿನ ವಿಷಯದ ತಿಳಿಸಿದಂಥ ಕುಂದು ಕೊರತೆಗಳೇ ಇತ ಬ್ಯಾಂಕುಗಳಲ್ಲಿಯೂ ಕಂಡುಬರುತ್ತವೆ. ಕೆನ ಬ್ಯಾಂಕಿನಲ್ಲಿ ಇದನ್ನು ಎಲ್ಲ ಅಧಿಕಾರಿಗಳಿಗ ಅನ್ವಯಿಸಲಾಗಿದೆ. ಅಲ್ಲಿ ಅಧಿಕಾರಿಯೊಬ್ಬ ಸಾಧನೆಯನ್ನು ಅಳೆಯಲು ಇದೊಂ ವಿಶ್ವಸನೀಯ ಉಪಕರಣವೆನಿಸಿದೆ.

ಒಟ್ಟಾರೆ ಹೇಳಬೇಕೆಂದರೆ ಈಗಿನ ಪರಿಸ್ಥಿ ಯಲ್ಲಿ ಬ್ಯಾಂಕುಗಳು ಇದನ್ನೊಂದು ವ್ಯ ಸ್ಥಾಪನ ಪದ್ಧತಿಯಾಗಿ ಬಳಸುತ್ತಿಲ್ಲವಾದರ ಚಟುವಟಿಕೆಗಳಿಗೆ ಒಂದು ದಿಕ್ಕು ತೋರಿಸ ಮತ್ತು ಅಧೀನ ಅಧಿಕಾರಿಗಳ ಸಾಧನೆಯನ ಅಳೆಯುವ ಉಪಕರಣವಾಗಿಯಾದರ 'ಉದ್ದೇಶಗಳ ಮೇರೆಗೆ ವ್ಯವಸ್ಥಾಪನ' ವ್ಯ ಯನ್ನು ಬಳಸುತ್ತಿವೆ ಎನ್ನಬಹುದು. ಈ ಬ ಹೆಚ್ಚು ಅರ್ಥಪೂರ್ಣವಾಗಬೇಕಾದ ಅಗತ್ಯವನ ಒತ್ತಿ ಹೇಳಬೇಕಾಗಿಲ್ಲ.

---

## ನಮೂನೆ IV

### ಪತ್ರಿಕೆಯ ಒಡೆತನ ಮತ್ತು ಇತರ ವಿವರಗಳನ್ನು ಕುರಿತ ಹೇಳಿಕೆ
### ಪತ್ರಿಕೆಗಳ ನೋಂದಣಿ ಕುರಿತ (ಕೇಂದ್ರದ) ನಿಯಮಾವಳಿಯ ನಿಯಮ 8ರಂತೆ

ಪತ್ರಿಕೆಯ ಹೆಸರು : ಬ್ಯಾಂಕಿಂಗ್ ಪ್ರಪಂಚ

ಪ್ರಕಟಣೆಯ ಸ್ಥಳ : ಬೆಂಗಳೂರು 560 002

ಪ್ರಕಟಣೆಯ ಅವಧಿ : ತ್ರೈಮಾಸಿಕ

ಮುದ್ರಕರು : ಜಿ. ಎಚ್. ಕೃಷ್ಣಮೂರ್ತಿ (ಭಾರತೀಯ), ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಗಡಿಯಾರ ಚೌಕ, ಮೈಸೂರು 570 001

ಪ್ರಕಾಶಕರು : ಪಾ. ರಾಜಗೋಪಾಲ (ಭಾರತೀಯ), ಪ್ರಧಾನ ಕಾರ್ಯದರ್ಶಿ, ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳ ಸಮನ್ವಯ ಸಮಿತಿ (ನೋಂ), 22 ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು 560 002

ಸಂಪಾದಕರು : ಎಚ್ಚೆಸ್ಕೆ (ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್, ಭಾರತೀಯ), 41 ಆರನೆಯ ಮುಖ್ಯ ರಸ್ತೆ, ಸರಸ್ವತೀಪುರಂ, ಮೈಸೂರು 570 009

ಪತ್ರಿಕೆಯ ಒಡೆತನ : ಸಮನ್ವಯ ಸಮಿತಿ (ನೋಂ), ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು, 22 ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು 560 002

ಮೇಲೆ ನೀಡಿರುವ ವಿವರಗಳು ನನ್ನ ಸಾಧ್ಯವಾದಮಟ್ಟಿಗಿನ ತಿಳಿವು ಮತ್ತು ನಂಬಿಕೆಯ ಪ್ರಕಾರ ಸತ್ಯವಾಗಿವೆಯೆಂದು ನಾನು, ಪಾ. ರಾಜಗೋಪಾಲ ಈ ಮೂಲಕ ಘೋಷಿಸುತ್ತೇನೆ.

ಮಾರ್ಚ್ ೧, ೧೯೦೦

**ಪಾ. ರಾಜಗೋಪಾಲ**
ಪ್ರಕಾಶಕ

